## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ

**ನಮೂನೆ-8**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಇದರ ರೀತ್ಯ)**

ಆದರ್ಶ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್, ದಾವಣಗೆರೆ ಇದರ ಕಾರ್ಯದರ್ಶಿಯವರು, ಶ್ರೀ ಟಿ.ಹೆಚ್. ಹೊನ್ನೂರ್ ಸಾಬ್ ಬಿನ್ ಲೇಟ್ ಹಸೇನ್ ಸಾಬ್, ದಾವಣಗೆರೆ ಇವರಿಂದ ಸಂಘಕ್ಕೆ ಬರಬೇಕಾದ ಸಾಲದ ಬಾಕಿಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿಯಲ್ಲಿ ದಾವಾ ಸಂಖ್ಯೆ: 2122/2003-04ರಲ್ಲಿ ಸದರಿಯವರ ಸಂಘಕ್ಕೆ ಆಧಾರ ಮಾಡಿರುವ ಈ ಸರ್ಟಿಫಿಕೇಟ್‌ನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು ಅವಾರ್ಡ್‌ನ್ನು ಪಡೆದಿದ್ದು, ಇದನ್ನು ಜಾರಿಗೊಳಿಸಲು ಕಲಂ 101ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ: 21.06.2004 ಮತ್ತು 30.12.2004ಗಳಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು, ಈ ಎಲ್ಲಾ ದಿನಗಳಂದು ನಡೆಸಲಾದ ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದ್ದರಿಂದ ಸದರಿ ಸೊತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ: 2122/2003-04 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಸಂಘಕ್ಕೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಸಂಘವು ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು ಸಾಲದ ಬಾಬ್ತು ರೂ. 3,90,000-00 (ಮೂರು ಲಕ್ಷದ ತೊಂಭತ್ತು ಸಾವಿರ ರೂಪಾಯಿಗಳು) ಮೊತ್ತಕ್ಕೆ ಸಂಘದ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಆದರ್ಶ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿಮಿಟೆಡ್, ದಾವಣಗೆರೆ ಇದರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ವರ್ಗಾವಣೆ ಮಾಡಿರುತ್ತೇನೆ ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

| ಸ್ಥಳ | ಸ್ಥಿರಾಸ್ತಿ ವಿವರ | ಅಳತೆ | ಸಾಲ ತೆಗೆದುಕೊಂಡಿರುವ ಸಾಮ್ಯ ಹಕ್ಕು ಬಾಧ್ಯತೆ | ಮಾರುಕಟ್ಟೆ ಮೌಲ್ಯ | ಸೊತ್ತು ಒಳಪಟ್ಟಿರುವ ಸಾಲದ ವಿವರಗಳು |
|---|---|---|---|---|---|
| ದಾವಣಗೆರೆ | ದಾವಣಗೆರೆ ಸಿಟಿ, 3ನೇ ವಾರ್ಡ್, 4ನೇ ಡಿವಿಜನ್, ಮುದ್ದಾಭೋವಿ ಕಾಲೋನಿ, ಬೇತೂರು ರಸ್ತೆ, 4ನೇ ಕ್ರಾಸ್‌ನಲ್ಲಿ ಬರತಕ್ಕ ವಾಸದ ಮನೆ ಮತ್ತು ಖಾಲಿ ಜಾಗದ ಚಾಲ್ತಿ ಡೋರ್ ನಂ.850/1 ರಿಂದ 850/10 ರವರೆಗೆ | 50x75 ಅಡಿ | ಸ್ವಂತ ಸ್ವಾಧೀನ | ರೂ.3.90 ಲಕ್ಷ | ಅಸಲು ಬಡ್ಡಿ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ.7,83,680-00 ದಿನಾಂಕ: 31.12.2004ಕ್ಕೆ ಇದ್ದಂತೆ |

**ಮೇಲ್ಕಂಡ ಸ್ಥಿರಾಸ್ತಿಗೆ ಚಕ್ಕುಬಂದಿ ಈ ಕೆಳಕಂಡಂತಿರುತ್ತದೆ**

ಪೂರ್ವಕ್ಕೆ: ಕ್ರಾಸ್ ರಸ್ತೆ, ಪಶ್ಚಿಮಕ್ಕೆ: ಕನ್ಸರ್‌ವೆನ್ಸಿ ರಸ್ತೆ, ಉತ್ತರಕ್ಕೆ: ಎ.ಎಂ. ತಿಪ್ಪೇಸ್ವಾಮಿಯವರ ಸ್ವತ್ತು, ದಕ್ಷಿಣಕ್ಕೆ: ಗೌಡ್ರ ಚನ್ನಬಸಪ್ಪನವರ ಸ್ವತ್ತು.

**ಅನುಬಂಧ**

**ಷರತ್ತುಗಳು**

1. ಸ್ಥಿರಾಸ್ತಿಯು ಸಂಘಕ್ಕೆ ವರ್ಗಾವಣೆ ಮಾಡಿದ ನಂತರ, ನಿಗದಿತ ಅವಧಿಯಲ್ಲಿ ಸಂಘಕ್ಕೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮಾ-ಖರ್ಚುಗಳನ್ನು ಮಾಡಿಕೊಂಡು ಬಾಕಿ ಉಳಿಯುವ ಸಾಲದ ಮೊಬಲಗನ್ನು ಜಮಾ ಮಾಡುವಂತೆ ಸಾಲಗಾರರಿಗೆ ತಿಳಿಸತಕ್ಕದ್ದು.
2. ಸಂಘಕ್ಕೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಸಂಘದ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆಗೊಳಪಟ್ಟಿರುತ್ತದೆ.
3. ಸಂಘವು ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.
4. ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲಿ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.
5. ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಸಂಘವು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.
6. ಈ ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಸಂಘವು ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಸರ್ಟಿಫಿಕೇಟನ್ನು ದಿನಾಂಕ: 21.04.2005ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ಕೊಟ್ಟಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪವಿಭಾಗ, ದಾವಣಗೆರೆ.

ಪಿ.ಆರ್.687

## ASSISTANT REGISTRAR OF CO-OPERATIVE SOCIETIES, SHIMOGA SUBDIVISION, SHIMOGA

**Sub:** Confirmation of Sale of immovable property pertaining to the judgement debtor Smt. Veena W/o Shivappa, Shimoga under execution No. 409/2003-04 and O.S. No. 1336:2002-03 in the file of Assistant Registrar of Co-operative Societies, Shimoga, issue of orders Reg.

**Ref:** Report of Sale officer City Co-operative Banks Ltd., Shimoga, vide letter, dated: 03.12.2004 and 22.02.2005.

**Preamble:**

The Secretary City Co-operative Bank, Shimoga has filed a dispute under section 70 of Karnataka Co-operative Societies Act 1959 against the member Smt. Veena W/o N. Shivappa, Siddeswara Telilinks, Opposite Road, Lakkappa Layout, Naveen Kumar House, Kashipura, Shimoga, before the Deputy Registrar of Co-operative Societies, Shimoga vide dispute No.1336/2002-03 and obtained an award against the said member for recovery of the debt due by the above said member for recovery of the debt to the above said Bank of dated: 27.06.2003. Further the decree holder bank has applied for an execution of award on 28.02.2004 the execution proceedings under execution on petition No.409/2003-04 on the file of this office has been taken against the judgement debtor. As per the K.C.S. Act and Rules. The sale officer, City Co-operative Bank Ltd., Shimoga has brought the mortgaged property of the judgement debtor Smt. Veena W/o N. Shivappa, Lakkappa Layout, Shimoga in to sale for recovery of the decretal dues of the bank in order to realise the dues the sale in public Auction was conducted on dated: 30.10.2004 after observing procedural for malities enumerated under Rules 38 of K.C.S. Rules 1960 in public auction the said scheduled mortgaged property was sold to the highest bidder Sri Rajiv Shetty S/o Govind shetty, Gurupura, Shimoga to the extent of Rs.1,86,000-00 (Rupees One Lakh Eight Six Thousand Only) there were no objection from any body either before the sale or after the sale of 30 days from the above sale conducted on 30.10.2004 in orders and to made it as obsutute and hence the following order.

**ORDER**

**No ARS: 24: ABN. EXN:344:2004-05, 145: Dated: 24th February, 2005**

In exercise of the powers conferred under Rule 38(6) (a) of Karnataka Co-operative Societies Rules 1960 read with Government Notification No. CMN.69:CLM:01, dated: 21.11.2001. The sale of immovable property detailed in the schedule here into under the execution proceedings of execution petition was sold on public auction conducted by the Sale Officer, City Co-operative Bank Ltd., Shimoga on 30.10.2004 is hereby confirmed in favour of the auction purchaser Sri Rajiv Shetty S/o Govindashetty Gurupura, Shimoga, an amount of Rs.1,86,000-00 (Rupees One Lakh Eight Six Thousand Only).

The sale certificate as required under Sub Rule (7) of Rule 38 of KCS Rules 1960 is issued separately to the purchaser.

SCHEDULE OF PROPERTY

| Name if the Khatedar | Village/ Taluk | Property | Sy.No. Khatha No. |
|---|---|---|---|
| Smt. Veena W/o Shivappa, Shimoga. | Shimoga City, Gurupura Area, Ward No.12 | R.C.C. Building 25x75 Ft | Khatha No. 109/122/ and New No.1776/2040/109 |

Given under my hand and seal on this day 24.02.2005.

Assistant Registrar of Co-operative Societies,
Shimoga Sub-division, Shimoga.

PR-688

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ಕರ್ನಾಟಕ ಸರ್ಕಾರ, ಬೆಂಗಳೂರು-52**

**ಸಂಖ್ಯೆ: ಸಿಬ್ಬಂದಿ.44.ಇಸಿಸಿ. 2003-04, ಬೆಂಗಳೂರು, ದಿನಾಂಕ:23ನೇ ಏಪ್ರಿಲ್, 2005**

**ವಿಷಯ:** ಶ್ರೀ ಗೋವಿಂದರಾಜ್ ಕೆ. ಗದಗ್ ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಳಗಾವಿ ಪ್ರಾಂತ, ಬೆಳಗಾವಿ, ಇವರ ಅನಧಿಕೃತ ಗೈರು ಹಾಜರಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ, ಅಪೀಲು) ನಿಯಮಗಳು 1957ರನ್ವಯ ಶಿಸ್ತು ಕ್ರಮ-ಸೇವೆಯಿಂದ ವಜಾಗೊಳಿಸುವ ಕುರಿತು.

**ಉಲ್ಲೇಖ:** 1. ಇದೇ ಸಮ ಸಂಖ್ಯೆ: ದಿನಾಂಕ: 26.03.2004ರ ತಿಳುವಳಿಕೆ ಪತ್ರ ಮತ್ತು ದಿನಾಂಕ: 29.05.2004ರ ಆದೇಶ.

2. ದಿನಾಂಕ: 08.11.2004ರ "ವಿಜಯ ಕರ್ನಾಟಕ", "ಡೆಕ್ಕನ್ ಹೆರಾಲ್ಡ್" ಪತ್ರಿಕಾ ಪ್ರಕಟಣೆಗಳು.

**ಪ್ರಸ್ತಾವನೆ:**

ಶ್ರೀ ಗೋವಿಂದರಾಜ್ ಕೆ. ಗದಗ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಳಗಾವಿ ಪ್ರಾಂತ, ಬೆಳಗಾವಿ, ಇವರು ದಿನಾಂಕ: 02.12.2002 ರಿಂದ ಪ್ರಾರಂಭವಾದಂತೆ ಯಾವುದೇ ಮುನ್ಸೂಚನೆ ನೀಡದೆ, ರಜೆ ಅರ್ಜಿ ಸಲ್ಲಿಸದೆ, ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾದ ಕಾರಣ ಇವರ ಗಂಭೀರ ಸ್ವರೂಪದ ದುರ್ನಡತೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 108ರನ್ವಯ ಇವರನ್ನು ಸೇವೆಯಿಂದ ವಜಾಗೊಳಿಸಲು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರಡಿ ಗೊತ್ತುಪಡಿಸಿದ ಕಾರ್ಯ ವಿಧಾನ ಅನುಸರಿಸುವ ಸಲುವಾಗಿ ಅನುಬಂಧ-1 ರಿಂದ 4ರವರೆಗಿನ ನಿರ್ದಿಷ್ಟ ದೋಷಾರೋಪಗಳ ಪಟ್ಟಿಯನ್ನು ಉಲ್ಲೇಖ(1)ರ ದಿನಾಂಕ: 26.03.2004ರ ತಿಳುವಳಿಕೆ ಪತ್ರದೊಂದಿಗೆ ಮೊದಲಿಗೆ ಹೊರಡಿಸಿ, ನಂತರ ದಿನಾಂಕ: 29.05.2004ರಲ್ಲೇ ಇವರ ವಿರುದ್ಧ ಶಿಸ್ತು ನಡವಳಿಗಳನ್ನು ಬಾಕಿ ಇಟ್ಟು ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು.

ಈ ಪ್ರಾಧಿಕಾರದ ದಿನಾಂಕ: 26.03.2004ರ ತಿಳುವಳಿಕೆ ಪತ್ರ ಮತ್ತು ಸೇವೆಯಿಂದ ಅಮಾನತ್ತಿನಲ್ಲಿಟ್ಟ ದಿನಾಂಕ: 29.05.2004ರ ಆದೇಶ ಇವುಗಳನ್ನು ಸದರಿ ನೌಕರರಿಗೆ ಜಾರಿಗೊಳಿಸಲು ಸಾಧ್ಯವಾಗದ ಕಾರಣ ಇವರ ವಿರುದ್ಧ ಪ್ರಸ್ತಾಪಿಸಿದ ಶಿಸ್ತು ನಡವಳಿಗಳಲ್ಲಿ ಇವರಿಗೆ ಮುಕ್ತ ಅವಕಾಶ

ನೀಡುವ ಸಲುವಾಗಿ ರಾಜ್ಯದ ಎರಡು ಪ್ರಮುಖ ದಿನ ಪತ್ರಿಕೆಗಳಾದ "ವಿಜಯ ಕರ್ನಾಟಕ" ಮತ್ತು "ಡೆಕ್ಕನ್ ಹೆರಾಲ್ಡ್"ನ ಎಲ್ಲಾ ಸಂಚಿಕೆಗಳಲ್ಲಿ ದಿನಾಂಕ: 22.09.2004ರ ನೋಟೀಸನ್ನು ಪ್ರಕಟಿಸಲು ಕ್ರಮ ಕೈಗೊಳ್ಳಲಾಗಿತ್ತು. ಇದರಂತೆ ದಿನಾಂಕ: 08.11.2004ರ "ವಿಜಯ ಕರ್ನಾಟಕ" ಮತ್ತು ಡೆಕ್ಕನ್ ಹೆರಾಲ್ಡ್" ಪತ್ರಿಕೆಗಳಲ್ಲಿ ಈ ನೋಟೀಸು ಪ್ರಕಟವಾಗಿರುತ್ತದೆ. ಪತ್ರಿಕೆಗಳಲ್ಲಿ ಪ್ರಕಟಿಸಿದಂತೆ ಮತ್ತು ನೋಟೀಸಿನಲ್ಲಿ ಸೂಚಿಸಿದಂತೆ, ಸೂಚಿತ ಅವಧಿಯೊಳಗಾಗಲೀ ಅಥವಾ ಇದುವರೆವಿಗಾಗಲೀ ಆರೋಪಿ ಸರ್ಕಾರಿ ನೌಕರರು ಉತ್ತರಿಸಿರುವುದಿಲ್ಲ ಅಥವಾ ಈ ಪ್ರಾಧಿಕಾರದ ಮುಂದೆ ಖುದ್ದು ಹಾಜರಾಗಿರುವುದಿಲ್ಲ.

ಸರ್ಕಾರಿ ನೌಕರರೊಬ್ಬರು ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿ ಉಳಿಯುವುದು ಗಂಭೀರ ಸ್ವರೂಪದ ದುರ್ನಡತೆಯಾಗಿರುತ್ತದೆ. ಪ್ರಸ್ತುತ ಪ್ರಕರಣದಲ್ಲಿ ಆರೋಪಿ ಸರ್ಕಾರಿ ನೌಕರ ಶ್ರೀ ಗೋವಿಂದರಾಜ್ ಕೆ. ಗದಗ್ ದ್ವಿತೀಯ ದರ್ಜೆ ಸಹಾಯಕರು, ಇವರಿಗೆ ಸಾಕಷ್ಟು ಕಾಲಾವಕಾಶ ನೀಡಲಾಗಿದ್ದರೂ ಸಹ ಇವರು ಉತ್ತರಿಸಿರುವುದಿಲ್ಲ. ಅಥವಾ ಹಾಜರಾಗಿರುವುದಿಲ್ಲ. ಆದ್ದರಿಂದ ಇವರನ್ನು ಸಂಪರ್ಕಿಸಲು ಸಾಧ್ಯವಿಲ್ಲವೆಂದು ಮತ್ತು ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(ii) ರನ್ವಯ ಇದೊಂದು ವಿಶೇಷ ವಿಧಾನದ ಪ್ರಕರಣವೆಂದು ಪರಿಗಣಿಸಿ ಈ ನಿಯಮಗಳಲ್ಲಿ ಗೊತ್ತುಪಡಿಸಿದ ಕಾರ್ಯ ವಿಧಾನವನ್ನು ಅನುಸರಿಸುವುದು ಕಾರ್ಯ ಸಾಧ್ಯವಿಲ್ಲವೆಂದು ಮನಗಂಡು, ಇವರ ವಿರುದ್ಧ ವಿಚಾರಣೆ ನಡೆಸದೆ ನಿಯಮ 8ರಡಿ ನಿರ್ದಿಷ್ಟಪಡಿಸಿದ ದಂಡನೆಗಳ ಪೈಕಿ ಸೂಕ್ತ ದಂಡನೆ ವಿಧಿಸಲು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಆದೇಶ**

ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 9(2)(ಬಿ)(ಬಿ) ಅಡಿ ಪ್ರದತ್ತವಾದ ಅಧಿಕಾರದನ್ವಯ ಕೆ.ಹೆಚ್. ಗೋಪಾಲಕೃಷ್ಣೆಗೌಡ, ಭಾ.ಆ.ಸೇ. ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು, ಆದ ನಾನು ಶ್ರೀ ಗೋವಿಂದರಾಜ್ ಕೆ. ಗದಗ್, ದ್ವಿತೀಯ ದರ್ಜೆ ಸಹಾಯಕರು, ಸಹಕಾರಿ ಸಂಘಗಳ ಜಂಟಿ ನಿಬಂಧಕರ ಕಛೇರಿ, ಬೆಳಗಾವಿ ಪ್ರಾಂತ, ಬೆಳಗಾವಿ, ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 108ನ್ನು ಓದಿಕೊಂಡಂತೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 8(viii) ರನ್ವಯ ಈ ಆದೇಶದ ದಿನಾಂಕದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ದಂಡನೆಯನ್ನು ವಿಧಿಸಿದ್ದೇನೆ.

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಪಿ.ಆರ್.689

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ**

**ಹಾಜರಿ:** ಶ್ರೀ ಜಿ. ಕೃಷ್ಣಮೂರ್ತಿ,
I/c ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಎಂವೈಟಿ 6213 (ಹೆಚ್‌ಜಿವಿ) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ವಾಹನ ಮಾಲಿಕರು ಶ್ರೀ ಅತೀಕ್ ಅಹ್ಮದ್, ಗೌರಾಪುರ, ತರೀಕೆರೆ ತಾಲ್ಲೂಕು ಇವರ ಅರ್ಜಿ ದಿನಾಂಕ: 08.04.2005.

ವಾಹನ ಸಂಖ್ಯೆ: ಎಂವೈಟಿ 6213 (ಹೆಚ್.ಜಿ.ವಿ.) ವಾಹನದ ನೋಂದಾಯಿತ ಮಾಲಿಕರಾದ ಶ್ರೀ ಅತೀಕ್ ಅಹ್ಮದ್, ಗೌರಾಪುರ, ತರೀಕೆರೆ ತಾಲ್ಲೂಕು, ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ: 31.05.2005ರವರೆಗೆ ಪಾವತಿಸಿದ್ದು, ದಿನಾಂಕ: 08.04.2005ರಂದು ಕಛೇರಿಗೆ ಸದರಿ ವಾಹನದ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೋಂದಣಿ ರದ್ದುಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲಿಕರ ಕೋರಿಕೆಯಂತೆ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಪ್ರಾಸಾಅ:ಚಿಮ: ಎಫ್‌ಟಿ: ಸಾರಿಗೆ: 05-06, ದಿನಾಂಕ: 11ನೇ ಏಪ್ರಿಲ್, 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಜಿ. ಕೃಷ್ಣಮೂರ್ತಿ, I/c ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂಖ್ಯೆ: ಎಂವೈಟಿ 6213 (ಭಾರಿ ಸರಕು ವಾಹನ) ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲಿಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

| | | |
|---|---|---|
| 1. | ವಾಹನ ಸಂಖ್ಯೆ: | ಎಂವೈಟಿ 6213 |
| 2. | ವರ್ಗ: | ಹೆಚ್‌ಜಿವಿ (ಟಾಟಾ) |
| 3. | ಚಾಸಿಸ್ ಸಂಖ್ಯೆ: | 344052110287 |
| 4. | ಇಂಜಿನ್ ಸಂಖ್ಯೆ: | 692ಡಿ02116964 |
| 5. | ಮಾಡೆಲ್: | 1981 (ಎಂಭತ್ತೊಂದು) |
| 6. | ಹೆಚ್.ಪಿ.ಎ: | ಹೊಂದಿಲ್ಲ |
| 7. | ಮಾಲಿಕರು: | ಶ್ರೀ ಅತೀಕ್ ಅಹ್ಮದ್ ಬಿನ್ ಮೊಹ್ಮದ್ ಶುಕುರ್ ಅಲಿ, ಹೌಸ್. ನಂ.176, ಗೌರಾಪುರ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ. |

**ಜಿ. ಕೃಷ್ಣಮೂರ್ತಿ I/c**
ನೋಂದಣಿ ಪ್ರಾಧಿಕಾರ ಮತ್ತು
ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಚಿಕ್ಕಮಗಳೂರು.

ಪಿ.ಆರ್.690

**ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಇವರ ನಡಾವಳಿ**

**ಹಾಜರಿ:** ಶ್ರೀ ಆರ್. ರಾಜಶೇಖರ್,
ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು.

**ವಿಷಯ:** ಸಿಟಿಎ-9848(ಎಲ್‌ಜಿವಿ) ಇದರ ನೋಂದಣಿ ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** ವಾಹನ ಮಾಲಿಕರು ಶ್ರೀ ಸೈಯದ್ ಮುಜಾಹರ್, ತರೀಕೆರೆ ಇವರ ಅರ್ಜಿ ದಿನಾಂಕ: 01.04.2005.

ವಾಹನ ಸಂಖ್ಯೆ: ಸಿಟಿಎ-9848 (ಎಲ್‌ಜಿವಿ) ವಾಹನದ ನೋಂದಾಯಿತ ಮಾಲಿಕರಾದ ಶ್ರೀ ಸೈಯದ್ ಮಜಾಹರ್, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಇವರು ಸದರಿ ವಾಹನದ ತೆರಿಗೆಯನ್ನು ದಿನಾಂಕ: 30.04.05 ರವರೆಗೆ ಪಾವತಿಸಿದ್ದು, ದಿನಾಂಕ: 01.04.05 ರಂದು ಕಛೇರಿಗೆ ಸದರಿ ವಾಹನದ ಎಲ್ಲಾ ದಾಖಲೆಗಳೊಂದಿಗೆ ಅರ್ಜಿ ನೀಡಿ ಈ ವಾಹನವು ಈಗ ಹಳೆಯದಾಗಿದ್ದು, ರಸ್ತೆಯಲ್ಲಿ ಓಡಿಸಲು ಅನರ್ಹವಾಗಿರುವುದರಿಂದ ಹಾಗೂ ದುರಸ್ಥಿ ದುಬಾರಿ ಆಗಿರುವುದರಿಂದ ನೊಂದಣಿ ರದ್ದು ಪಡಿಸಬೇಕೆಂದು ಕೋರಿಕೆ ಸಲ್ಲಿಸಿರುತ್ತಾರೆ. ಮಾಲಿಕರ ಕೋರಿಕೆಯಂತೆ ಈ ವಾಹನದ ನೋಂದಣಿ ರದ್ದುಪಡಿಸಲು ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಪ್ರಾಸಾಅ:ಚಿಮ: ಎಫ್‌ಟಿ: ಸಾರಿಗೆ: 04-05, ದಿನಾಂಕ:2ನೇ ಏಪ್ರಿಲ್, 2005**

ಕೇಂದ್ರ ಮೋಟಾರು ವಾಹನ ಕಾಯಿದೆ, 1988ರ ಕಲಂ 55ರಲ್ಲಿ ದತ್ತವಾದ ಅಧಿಕಾರದ ಮೇರೆಗೆ ಶ್ರೀ ಆರ್. ರಾಜಶೇಖರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾಗೂ ನೋಂದಣಿ ಪ್ರಾಧಿಕಾರ, ಚಿಕ್ಕಮಗಳೂರು ಆದ ನಾನು, ವಾಹನ ಸಂಖ್ಯೆ:ಸಿಟಿಎ-9848 (ಎಲ್‌ಜಿವಿ) ವಾಹನದ ನೋಂದಣಿ ಹಾಗೂ ನೋಂದಣಿ ಪತ್ರವನ್ನು ಸದರಿ ವಾಹನದ ಮೇಲೆ ಮುಂದೆ ಲೆಕ್ಕ ಪರಿಶೋಧನೆಯಿಂದ ಬರಬೇಕಾದ ಬಾಕಿ ಏನಾದರೂ ಕಂಡು ಬಂದಲ್ಲಿ ವಾಹನದ ಮಾಲಿಕರು ಪಾವತಿಸಲು ಬದ್ಧರಿರುತ್ತಾರೆಂಬ ಷರತ್ತಿನ ಮೇಲೆ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು:**

| | | |
|---|---|---|
| 1. | ವಾಹನ ಸಂಖ್ಯೆ: | ಸಿಟಿಎ-9848 |
| 2. | ವರ್ಗ: | ಎಲ್‌ಜಿವಿ |
| 3. | ಚಾಸಿಸ್ ಸಂಖ್ಯೆ: | 3 ಎಫ್‌ಡಿ 505590 |
| 4. | ಇಂಜಿನ್ ಸಂಖ್ಯೆ: | ಡಿ 291314 |
| 5. | ಮಾಡೆಲ್: | 1988 |
| 6. | ಹೆಚ್.ಪಿ.ಎ: | ಇರುವುದಿಲ್ಲ |
| 7. | ಮಾಲಿಕರು: | ಶ್ರೀ ಸೈಯದ್ ಮಜಾಹರ್ ಬಿನ್ ಸೈಯದ್ ಜಾಫರ್, ಬಾವಿಕೆರೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು. |

**ಆರ್. ರಾಜಶೇಖರ್**

ಪಿ.ಆರ್.692 ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಪ್ರಾಧಿಕಾರ, ಚಿಕ್ಕಮಗಳೂರು.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ನ್ಯಾಯಾಲಯದಲ್ಲಿ**

**ಪೀಣ್ಯ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 326/98 ದಿನಾಂಕ: 9ನೇ ಜೂನ್, 1998**

**ಉಪಸ್ಥಿತರು: ಬಿ.ಎಂ. ಪರಮೇಶ್ವರ, ಭಾ.ಅ.ಸೇ.**

**ಸಂಖ್ಯೆ: ಎ4-ಎಸ್‌ಓಸಿ-ಸಿಆರ್-7/1998-99, ದಿನಾಂಕ: 12ನೇ ಏಪ್ರಿಲ್, 2005**

**ಫಿರ್ಯಾದಿ** : ಶ್ರೀ ನ್ಯಾಮೇಗೌಡ,
ಆರಕ್ಷಕ ನಿರೀಕ್ಷಕರು, ಪೀಣ್ಯ ಪೊಲೀಸ್ ಸ್ಟೇಷನ್, ಬೆಂಗಳೂರು.

**ವಿರುದ್ಧ**

**ಅರ್ಜಿದಾರ** : ಸಿ.ಎಸ್. ರವಿಶಂಕರ್ ಬಿನ್ ಸಿ.ಎನ್. ಸತ್ಯನಾರಾಯಣ ಶೆಟ್ಟಿ,
ಚಿಕ್ಕಪೇಟೆ, ತುಮಕೂರು.

**ಆರೋಪಿಗಳು** :
1. ಷಾದೀಖ್ ಬಿನ್ ದಸ್ತಗಿರಿ ಸಾಬ್
2. ಮೊಹಮ್ಮದ್ ಷಾದೀಖ್ ಬಿನ್ ಅಬ್ದುಲ್ ಅಮಿದ್
3. ಕೃಷ್ಣಯ್ಯ ಬಿನ್ ಮುದ್ದಯ್ಯ,
4. ವಿ.ಹೆಚ್. ಪಾಟೀಲ್ ಬಿನ್ ಸತಿಗೌಡ,
5. ನೂರುಲ್ಲ ಬಿನ್ ಅಹಮ್ಮದ್ ಜಾನ್
6. ಪ್ಯಾರಿಜಾನ್ } ಸಿಕ್ಕಿಲ್ಲ
7. ಷಮೀರ್ ಪಾಷ್ }

1. **ಪ್ರಕರಣದ ಮುಖ್ಯಾಂಶಗಳು:** ದಿನಾಂಕ: 09.06.1998ರಂದು ಮಧ್ಯಾಹ್ನ 2.15 ಗಂಟೆ ಸುಮಾರಿಗೆ ತಲುಪಿದ ಖಚಿತ ವರ್ತಮಾನದ ಮೇರೆಗೆ ಪಿರ್ಯಾದಿ ಶ್ರೀ ನ್ಯಾಮೇಗೌಡ ಆರಕ್ಷಕ ನಿರೀಕ್ಷಕರು, ಪೀಣ್ಯ ಪೊಲೀಸ್ ಸ್ಟೇಷನ್ ರವರು, ಎಂ.ಎಸ್. ರಸ್ತೆ, ಟಿ. ದಾಸರಹಳ್ಳಿ, ಬೆಂಗಳೂರು ಅಯ್ಯಪ್ಪ ಸ್ವಾಮಿ ದೇವಸ್ಥಾನದ ಬಳಿಯಿರುವ ಮಾವಿನ ತೋಟದಲ್ಲಿ ಆರೋಪಿಗಳು ಯಾವುದೇ ರಹದಾರಿ ಪತ್ರ ಹೊಂದದೆ ಅಕ್ರಮವಾಗಿ ಸುಮಾರು 350 ಕೆ.ಜಿ. ಶ್ರೀಗಂಧದ ತುಂಡುಗಳನ್ನು ಅರ್ಜಿದಾರನ ಕ್ಯಾಂಟರ್ ವಾಹನ ನೋಂದಣಿ ಸಂಖ್ಯೆ: ಕೆಎ-06-8424 ನೇದ್ದರಲ್ಲಿ ಸಾಗಿಸುತ್ತಿದ್ದನ್ನು ಸದರಿ ಸ್ಥಳಕ್ಕೆ ಸುಮಾರು 2.30ಕ್ಕೆ ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ ಬಂದು ಅದನ್ನು ಖಚಿತ ಪಡಿಸಿಕೊಂಡು ಶ್ರೀಗಂಧದ ಮರದ ತುಂಡುಗಳನ್ನು ಹಾಗೂ ವಾಹನವನ್ನು ಅಮಾನತ್ತು ಪಡಿಸಿಕೊಂಡ ಕಾರಣ ಪ್ರಸ್ತುತ ಮೊಕದ್ದಮೆಯನ್ನು ನೋಂದಾಯಿಸಿಕೊಂಡದ್ದು ಇರುತ್ತದೆ.

2. ಪ್ರಾಧಿಕಾರಕ್ಕೆ ಶ್ರೀಗಂಧದ ಮರದ ತುಂಡುಗಳು ವಾಹನ ಹಾಗೂ ಪ್ರಕರಣದ ಕಾಗದ ಪತ್ರಗಳ ನಕಲುಗಳು ತಲುಪಿದ ನಂತರ ಪ್ರಾಧಿಕಾರವು ಈ ಬಗ್ಗೆ ದಿನಾಂಕ: 10.07.1998ರಂದು ಕರ್ನಾಟಕ ಅರಣ್ಯ ಕಾಯ್ದೆ ಕಲಂ 71(ಬಿ) ಕೆಳಗೆ ಕಾರಣ ಕೇಳುವ ನೋಟಿಸನ್ನು ಅರ್ಜಿದಾರನಿಗೆ ನೀಡಿರುತ್ತದೆ. ಇದಕ್ಕೆ ಮುಂಚಿತವಾಗಿ ಪ್ರಾಧಿಕಾರಕ್ಕೆ ದಿನಾಂಕ: 26.06.1998 ರಂದು ಅರ್ಜಿದಾರನು ತನ್ನ ನ್ಯಾಯವಾದಿಗಳ ಮುಖಾಂತರ ಪ್ರಾಧಿಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀಗಂಧದ ಮರದ ತುಂಡುಗಳ ಅಕ್ರಮ ಸಾಗಾಣಿಕೆಗೆ ಹಾಗೂ ತನ್ನ ವಾಹನಕ್ಕೆ ಯಾವುದೇ ಸಂಬಂಧವಿರದಿದ್ದರಿಂದ ಮುಟ್ಟುಗೋಲು ಮೊಕದ್ದಮೆಯನ್ನು ಕೈಬಿಟ್ಟು ತನ್ನ ವಾಹನವನ್ನು ಆತನ ಸುಪರ್ದಿಗೆ ನೀಡಬೇಕು ಅಂತ ವಿನಂತಿಸಿದ್ದು ಇದೆ. ಅದೇ ರೀತಿ ಬೇರೊಂದು ಅರ್ಜಿಯನ್ನು ಸಹ ಸಲ್ಲಿಸಿ ಪ್ರಕರಣದ ವಿಚಾರಣೆಯಾಗುವವರೆಗೆ ವಾಹನವನ್ನು ತನ್ನ ಮಧ್ಯಂತರ ವಶಕ್ಕೆ ನೀಡಲು ಕೂಡ ವಿನಂತಿಸಿದ್ದು ಇರುತ್ತದೆ. ಸದರಿ ಅರ್ಜಿಗೆ ಸಹಾಯಕ ಅಭಿಯೋಗ ನಿರ್ದೇಶಕರು ದಿನಾಂಕ: 18.07.1998ರಂದು ತಮ್ಮ ತಕರಾರುಗಳನ್ನು ಸಲ್ಲಿಸಿದ್ದು ಇರುತ್ತದೆ. ಈ ಬಗ್ಗೆ ನನ್ನ ಹಿಂದಿನ ಅಧಿಕಾರಿಗಳು ಆದೇಶ ಒಂದನ್ನು ದಿನಾಂಕ: 31.10.1998ರಂದು ನೀಡಿ ಅರ್ಜಿದಾರನು 4,00,000.00 ರೂಪಾಯಿಗಳ ಬ್ಯಾಂಕ್ ಗ್ಯಾರೆಂಟಿಯನ್ನು ನೀಡಿದಲ್ಲಿ ವಾಹನವನ್ನು ಆತನ ಮಧ್ಯಂತರ ವಶಕ್ಕೆ ಪಡೆಯಲು ಸೂಚಿಸಿದ್ದು ಇರುತ್ತದೆ. ಸದರಿ ಆದೇಶದ ಪ್ರಕಾರ ಅರ್ಜಿದಾರನು ದಿನಾಂಕ: 18.01.1999 ರಂದು ವಿಜಯ ಬ್ಯಾಂಕ್, ದಾಬಸ್ ಪೇಟೆ ಬ್ರಾಂಚಿನ 4,00,000.00 ರೂಪಾಯಿಗಳ ಬ್ಯಾಂಕ್ ಗ್ಯಾರೆಂಟಿ ಕೂಡ ಪ್ರಾಧಿಕಾರಕ್ಕೆ ನೀಡಿದ್ದು ಅದು ದಿನಾಂಕ: 15.01.2000 ರವರೆಗೆ ಜಾರಿಯಲ್ಲಿತ್ತು. ಆ ಪ್ರಕಾರ ಅರ್ಜಿದಾರರು ತನ್ನ ವಾಹನವನ್ನು ತನ್ನ ಮಧ್ಯಂತರ ವಶಕ್ಕೆ ಪಡೆದದ್ದು ಕೂಡ ಇರುತ್ತದೆ. ಅರ್ಜಿದಾರನು ವಿಧಿಸಿದ ಷರತ್ತನ್ನು ಉಲ್ಲಂಘಿಸಿದ ಕಾರಣ ಪುನಃ ಇಲಾಖಾ ಸ್ವಾಧೀನಕ್ಕೆ ಪಡೆದು ಹಾಲಿ ಇಲಾಖಾ ಸ್ವಾಧೀನದಲ್ಲಿರುತ್ತದೆ.

3. ಪ್ರಾಧಿಕಾರವು ಮುಟ್ಟುಗೋಲು ಪ್ರಕರಣದ ವಿಚಾರಣೆ ಕುರಿತು ಫಿರ್ಯಾದಿಗೆ, ಮಹಜರ್ ಸಾಕ್ಷಿಗಳಿಗೆ ಅರ್ಜಿದಾರನಿಗೆ ಹಾಗೂ ಅವರ ನ್ಯಾಯವಾದಿಗಳಿಗೆ ಮತ್ತು ಎ.ಡಿ.ಪಿ. ಯವರಿಗೆ ಅನೇಕ ಬಾರಿ ಸಮನ್ಸ್‌ಗಳು/ ನೋಟೀಸ್‌ಗಳನ್ನು ನೀಡಿ ವಿವಿಧ ದಿನಾಂಕಗಳನ್ನು ನಿಗದಿ ಪಡಿಸಿದ್ದು ಇರುತ್ತದೆ.

4. ಈ ಬಗ್ಗೆ ಅಭಿಯೋಜನವು ತನ್ನ ಪರವಾಗಿ ಒಂದು ಸಾಕ್ಷಿಯನ್ನು ಮಾತ್ರ ಅಂದರೆ ಫಿರ್ಯಾದಿ-ಪೊಲೀಸ್ ಅಧಿಕಾರಿಯನ್ನು ವಿಚಾರಿಸಿ, ಏಳು ದಾಖಲಾತಿಗಳನ್ನು ಗುರುತಿಸಿಕೊಂಡಿರುತ್ತದೆ. ಅದೇ ರೀತಿ ಅರ್ಜಿದಾರನು ತನ್ನನ್ನು ಸೇರಿಸಿಕೊಂಡು ಒಟ್ಟು ನಾಲ್ಕು ಸಾಕ್ಷಿಗಳನ್ನು ತನ್ನ ಪರವಾಗಿ ವಿಚಾರಿಸಿಕೊಂಡದ್ದು ಇರುತ್ತದೆ. ಈ ಬಗ್ಗೆ ಉಭಯತರ ವಾದ-ವಿವಾದಗಳನ್ನು ಕೇಳಲಾಗಿರುತ್ತದೆ.

5. ಈ ಮೇಲೆ ಹೇಳಿದಂತೆ ಅರ್ಜಿದಾರನ ವಾಹನದಲ್ಲಿ ಘಟನೆಯ ದಿನಾಂಕದಂದು ಅಕ್ರಮ ಶ್ರೀಗಂಧದ ಸಾಗಾಣಿಕೆಯನ್ನು ಅಭಿಯೋಜನವು ಫಿರ್ಯಾದಿ-ಪೊಲೀಸ್ ಅಧಿಕಾರಿ- ಪ್ರಾಸಾ-1ನ ಸಾಕ್ಷಿ ಹಾಗೂ ನಿಶಾನೆ ಪಿ.1 ರಿಂದ ಪಿ.7 ನೇ ದಾಖಲಾತಿಗಳನ್ನು ಸ್ವತಂತ್ರವಾಗಿ ಸಿದ್ದಪಡಿಸಲಾಗಿರುತ್ತದೆಯೋ ಹೇಗೆ? ಮತ್ತು ಆ ರೀತಿ ಆಗದಿದ್ದಲ್ಲಿ ವಾಹನವನ್ನು ಹಾಗೂ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೋ ಹೇಗೆ? ಹಾಗೂ ಶ್ರೀಗಂಧವನ್ನು ಮಾತ್ರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕೋ ಹೇಗೆ? ಎಂಬ ಅಂಶಗಳನ್ನು ನಾನು ಇದರಲ್ಲಿ ಇತ್ಯರ್ಥ ಪಡಿಸಬೇಕಾಗಿರುತ್ತದೆ.

6. ಪ್ರಾ.ಸಾ-1 ಫಿರ್ಯಾದಿ-ಪೊಲೀಸ್ ಅಧಿಕಾರಿ ಈತನ ಸಾಕ್ಷಿ ಮತ್ತು ನಿಶಾನೆ ಪಿ-1 ರಿಂದ ಪಿ-7ನೇ ದಾಖಲಾತಿಗಳ ಪ್ರಕಾರ ದಿನಾಂಕ: 09.06.1998 ರಂದು 1ರಿಂದ 5ನೇ ಆರೋಪಿಗಳು ಎಂ.ಎಸ್. ರಸ್ತೆಯ ಸುಬ್ಬರಾಜ್ ಅರಸ್‌ಗೆ ಸೇರಿದ ಮಾವಿನ ತೋಪಿನಲ್ಲಿ ಶ್ರೀಗಂಧದ ಮರದ ತುಂಡುಗಳನ್ನು ಅರ್ಜಿದಾರನ ವಾಹನದಲ್ಲಿ ಸಾಗಾಣಿಕೆ ಮಾಡಲು ಪ್ರಯತ್ನಿಸುತ್ತಿದ್ದಾಗ ಅದನ್ನು ತಾವು ಪತ್ತೆ ಹಚ್ಚಿ ಪ್ರಸ್ತುತ ಮೊಕದ್ದಮೆಯನ್ನು ನೋಂದಾಯಿಸಿಕೊಂಡಿರುವುದಾಗಿ ಸಾಕ್ಷಿ ನುಡಿದಿರುತ್ತಾರೆ. ಈ ಸಾಕ್ಷಿಯನ್ನು ಅರ್ಜಿದಾರನ ನ್ಯಾಯವಾದಿಗಳು ವಿವರವಾಗಿ ಪಾಟೀ ಸವಾಲು ಮಾಡಿರುತ್ತಾರೆ. ಪ್ರಕರಣದಲ್ಲಿಯ ಮಹಜರ್ ಸಾಕ್ಷಿಗಳಾದ ಎನ್. ಶಿವಣ್ಣ ಹಾಗೂ ಶಿವರುದ್ರಯ್ಯ ಇವರುಗಳಿಗೆ ಪ್ರಾಧಿಕಾರವು ಅನೇಕ ಬಾರಿ ಸಮನ್ಸ್‌ಗಳನ್ನು/ ನೋಟೀಸ್‌ಗಳನ್ನು ಆರ್.ಪಿ.ಎ.ಡಿ. ಮೂಲಕ ಕಳುಹಿಸಿದ್ದು ಅವುಗಳು ಸದರಿಯವರಿಗೆ ಜಾರಿಯಾಗದೆ ಪ್ರಾಧಿಕಾರಕ್ಕೆ ಅಂತಹ ವ್ಯಕ್ತಿಗಳು ಸದರಿ ವಿಳಾಸದಲ್ಲಿ ಇರುವುದಿಲ್ಲ ಅಂತ ಅಂಚೆ ಇಲಾಖೆಯ ಷರಾಗಳೊಂದಿಗೆ ವಾಪಸ್ಸು ಆಗಿದ್ದು ಇದ್ದುದರಿಂದ ಪ್ರಸ್ತುತ ಪ್ರಕರಣದಲ್ಲಿ ಪ್ರಾಸಾ-1, ಫಿರ್ಯಾದಿ-ಪೊಲೀಸ್ ಅಧಿಕಾರಿಯ ಸಾಕ್ಷಿಯನ್ನು ಸ್ವತಂತ್ರ ಸಾಕ್ಷಿಗಳಾದ ಈ ಮೇಲೆ ಹೇಳಿದ ಮಹಜರ್ ಸಾಕ್ಷಿಗಳು ಬೆಂಬಲಿಸದೆ ಇರುವುದು ಕಂಡು ಬರುತ್ತದೆ. ಈ ಬಗ್ಗೆ ನಾವು ಅರ್ಜಿದಾರ ಹಾಗೂ ತನ್ನ ಪರವಾಗಿ ಇತರೆ ಮೂವರು ಸ್ವತಂತ್ರ ಸಾಕ್ಷಿಗಳ ಸಾಕ್ಷಿಯನ್ನು ಪ್ರಾಧಿಕಾರಕ್ಕೆ ಒದಗಿಸಿದ್ದನ್ನು ಪರಿಶೀಲಿಸಿದಾಗ ಘಟನೆಯ ದಿನಾಂಕ ಸ್ಥಳ ಹಾಗೂ ವೇಳೆಯೆಂದು ಅರ್ಜಿದಾರನ ಈ ಮೇಲೆ ಹೇಳಿದ ವಾಹನದಲ್ಲಿ ಶ್ರೀಗಂಧದ ಕಡಿದ ಮರದ ತುಂಡುಗಳು ಅಕ್ರಮ ಸಾಗಾಣಿಕೆಯಾಗುತ್ತಿದ್ದ ಬಗ್ಗೆ ಬಲವಾದ ಸಂಶಯ ಕಂಡು ಬರುತ್ತದೆ. ಅದು ಅಲ್ಲದೆ ಪ್ರಸ್ತುತ ಪ್ರಕರಣದಲ್ಲಿ ಅರ್ಜಿದಾರ್ ವಾಹನ ಮಾಲೀಕ ನೇರವಾಗಿ ಘಟನೆಯಲ್ಲಿ ಆರೋಪಿಯಾಗಿ ಭಾಗವಹಿಸದೆ ಇರುವುದು ಕೂಡ ಕಂಡು ಬರುತ್ತದೆ. ಘಟನೆಯ ಸಮಯಕ್ಕೆ ಅರ್ಜಿದಾರನ ವಾಹನದಲ್ಲಿ ರಾಗಿ ಹಾಗೂ ಹಲಸಿನ ಹಣ್ಣುಗಳು ಇದ್ದ ಬಗ್ಗೆ ಅವುಗಳ ಮಾಲಿಕರು ಪ್ರಾಧಿಕಾರದ ಮುಂದೆ ವಿವರವಾದ ತಮ್ಮಗಳ ಸಾಕ್ಷಿಗಳನ್ನು ನುಡಿದಿರುತ್ತಾರೆ. ಈ ಕಾರಣಗಳಿಂದ ಪ್ರಾಧಿಕಾರದ ಮುಂದೆ ಇರಿಸಿದ ಸಾಕ್ಷ್ಯಾಧಾರಗಳಿಂದ ಅರ್ಜಿದಾರನ ವಾಹನದಲ್ಲಿ ಅಕ್ರಮ ಶ್ರೀಗಂಧ ಸಾಗಾಣಿಕೆಯಾಗುತ್ತಿದ್ದ ಬಗ್ಗೆ ಸಂಶಯ ಬರುವುದರಿಂದ ಹಾಗೂ ಅರ್ಜಿದಾರನು ಪ್ರಕರಣದಲ್ಲಿ ವಶಪಡಿಸಿಕೊಂಡಿರುವ ಶ್ರೀಗಂಧವನ್ನು ತನ್ನದು ಅಂತ ಕೇಳದೆ ಇರುವುದರಿಂದ ಕೆಎ.06.8424ರಲ್ಲಿ ಅರ್ಜಿದಾರನು ಶ್ರೀಗಂಧವನ್ನು ಸಾಗಿಸುತ್ತಿದ್ದ ಬಗ್ಗೆ ಸಂಶಯಕ್ಕೆ ಎಡೆ ಇಲ್ಲದಂತೆ ಅಭಿಯೋಜನೆಯವರು ಸಾಬೀತು ಮಾಡದ ಕಾರಣ ಪ್ರಕರಣದಲ್ಲಿ ಅರ್ಜಿದಾರನ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳದೆ ಈ ಕೆಳಕಂಡ ಆದೇಶ ಹೊರಡಿಸುತ್ತಿದ್ದೇನೆ.

**ಆದೇಶ**

ಬಿ.ಎಂ. ಪರಮೇಶ್ವರ ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಆದ ನಾನು ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಾಂಭರಿಸಿದ ನಂತರ ಕರ್ನಾಟಕ ಅರಣ್ಯ ಕಾಯ್ದೆ ಕಲಂ 71(ಎ) ಕೆಳಗೆ ಇರುವ ಅಧಿಕಾರವನ್ನು ಚಲಾಯಿಸಿ ಪೀಣ್ಯ ಪೊಲೀಸರು ತಮ್ಮ ಮೊಕದ್ದಮೆ ಸಂಖ್ಯೆ: 326/1998ರಲ್ಲಿ ಮಾಲು ಪಟ್ಟಿ ಸಂಖ್ಯೆ: 133/98 ಹಾಗೂ 134/98ರ ಕೆಳಗೆ ವಶಪಡಿಸಿಕೊಂಡಿರುವ ಶ್ರೀಗಂಧದ ತುಂಡುಗಳನ್ನು ಮಾತ್ರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅರ್ಜಿದಾರನ ಕ್ಯಾಂಟರ್ ವಾಹನ ನೋಂದಣಿ ಸಂಖ್ಯೆ: ಕೆಎ-06-8424ನೇದ್ದನ್ನು ಅರ್ಜಿದಾರನ ವಶಕ್ಕೆ ಅಂತಿಮವಾಗಿ ಬಿಟ್ಟುಕೊಡಲು ಆದೇಶಿಸಿರುತ್ತೇನೆ. ಪ್ರಸ್ತುತವಾಗಿ ಅರ್ಜಿದಾರನ ವಾಹನವು ಇಲಾಖೆಯ ವಶದಲ್ಲೇ ಇದ್ದು, ಅದನ್ನು ಈ ಕೂಡಲೇ ಆತನ ಸುಪರ್ದಿಗೆ ಬಿಡಲು ಆದೇಶಿಸಿದ್ದೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟಿದ್ದು ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 12.04.2005ರಂದು ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

**ಬಿ.ಎಂ. ಪರಮೇಶ್ವರ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ನಗರ ವಿಭಾಗ, ಬೆಂಗಳೂರು.

ಪಿ.ಆರ್.693

## IN THE COURT OF COMMISSIONER FOR WORKMEN'S COMPENSATION, BIDAR

**PROCLAMATION**

**No.LOB/WCA/Cr-15/2005**

**Applicants:**
Savita W/o Late Gurulingayya
Age:20yrs, Occ. House hold,
R/o: Juljapur Tq: Aurad, District: Bidar, &
3 Others.

**V/s**

**Respondents:**
1. Gurulingayya Swamy S/o Channaya Swamy, Age: Major, Occ: Business, R/o: Village Mallapur Tq: District-Bidar.
2. The Branch Manager, New India Assurance Co.Ltd., Bidar.

Smt Savita W/o Late Gurulingayya, R/o Juljapur Tq: Aurad District:Bidar have/has filed application in this court claiming compensation stating that Late: Gurulingayya was working as Driver Under the Respondent No. I he met with an accident arising out of and during the course of employment as a result he died on 28-02-2005

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications or objections are received within the specified date the court will proceeded further in the matter.

COMMISSIONER FOR WORKMEN'S
COMPENSATION, BIDAR.

PR-694

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪ್ರಕರಣದ ಸಂಖ್ಯೆ: ಕಾನಪ:ಪ್ರ: ಎಫ್.ಸಿಆರ್/ 20/ 2005, ದಿನಾಂಕ: 26ನೇ ಏಪ್ರಿಲ್, 2005**

**ಅರ್ಜಿದಾರರು:**
1. ಬೈರಪ್ಪ
2. ಲಕ್ಷ್ಮಕ್ಕ

ವಾಸ: ಪಿಳ್ಳೇಕೈನಹಳ್ಳಿ, ಚಿತ್ರದುರ್ಗ ತಾಲ್ಲೂಕು.

**ವಿರುದ್ಧ**

**ಪ್ರತಿವಾದಿಗಳು**
1. ಎಸ್.ವೈ. ಗೋವಿಂದರೆಡ್ಡಿ ಟ್ರಾಕ್ಟರ್ ಮಾಲಿಕರು. ಕೆಎ-16-ಟಿ-3594-95, ಚಿತ್ರದುರ್ಗ.
2. ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ 1) ಬೈರಪ್ಪ, 2) ಲಕ್ಷ್ಮಕ್ಕ ಇವರು, ತಾವು ಮೃತ ಬೋರಪ್ಪ @ ಬೋರಯ್ಯ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ ಬೋರಪ್ಪ @ ಬೋರಯ್ಯ ಇವರು ಒಂದನೇ ಪ್ರತಿವಾದಿಗಳಾದ ಎಸ್.ವೈ. ಗೋವಿಂದರೆಡ್ಡಿ, ಇವರಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧಿಸಿದ ವರದಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್.695

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

**ಅಧಿಸೂಚನೆ**

**ಸಂಖ್ಯೆ: 12/ ಸಂವಿ/ ಸಿ.ಓ.ಪಿ. 2005, ದಿನಾಂಕ:30ನೇ ಏಪ್ರಿಲ್, 2005**

ಬೆಂಗಳೂರು ನಗರದಲ್ಲಿ ಕೆಂಗಲ್ ಹನುಮಂತಯ್ಯ ಜೋಡಿ ರಸ್ತೆ ದಲಾಲ್ ಪೆಟ್ರೋಲ್ ಬಂಕ್‌ನಿಂದ ಲಾಲ್‌ಬಾಗ್ ಪೂರ್ವ ದ್ವಾರದವರೆವಿಗೆ ರಸ್ತೆಯ ಎರಡೂ ಬದಿಗಳಲ್ಲಿ ಹೆಚ್ಚಿನದಾಗಿ ವಾಣಿಜ್ಯ ಮಳಿಗೆಗಳು ಇರುತ್ತವೆ. ಈ ರಸ್ತೆಯಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಕೇಂದ್ರ ಕಛೇರಿ ಮತ್ತು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ಮೂರು ಘಟಕ ಕಾರ್ಯಾಲಯಗಳು ಸೇರಿದಂತೆ ಇತರೆ ಸರ್ಕಾರಿ ಸ್ವಾಮ್ಯದ ಕಛೇರಿಗಳೂ ಸಹ ಇರುತ್ತವೆ. ಈ ರಸ್ತೆಯಲ್ಲಿ ಸಾರ್ವಜನಿಕರ ವಾಹನಗಳಿಗೆ ಅನುಕೂಲವಾಗುವಂತೆ ಮೇಲು ಸೇತುವೆಯನ್ನು ನಿರ್ಮಿಸಲಾಗಿದೆ. ಜೋಡಿ ರಸ್ತೆ ಎರಡೂ ಭಾಗಗಳು ವಾಹನ ದಟ್ಟಣೆಗೆ ಅನುಗುಣವಾಗಿ ಇರದೆ ಕಿರುದಾಗಿರುತ್ತವೆ. ಈ ರಸ್ತೆಯ ಎರಡೂ ಕಡೆಗಳಲ್ಲಿ ವಾಹನಗಳ ನಿಲುಗಡೆಯಾಗುತ್ತಿರುವುದರಿಂದ

ವಾಹನಗಳ ಸಂಚಾರ ದಟ್ಟಣೆಯು ಸುಗಮವಾಗಿ ಸಾಗದೆ ಆಗಾಗ್ಗೆ ಸ್ಥಗಿತಗೊಂಡು ಅಸ್ತವ್ಯಸ್ಥಗೊಳ್ಳುತ್ತಿರುವುದಲ್ಲದೆ ಅಪಘಾತಗಳೂ ಸಹ ಹೆಚ್ಚಾಗಿ ಸಂಭವಿಸುತ್ತಿವೆ. ಪ್ರಯುಕ್ತ ಸಾರ್ವಜನಿಕ ವಾಹನಗಳ ಸುಗಮ ಸಂಚಾರದ ಹಿತದೃಷ್ಟಿಯಿಂದ ಹಾಗೂ ಅಪಘಾತಗಳನ್ನು ತಹಬಂದಿಗೆ ತರುವ ನಿಟ್ಟಿನಲ್ಲಿ ಲಾಲ್‌ಭಾಗ್ ಪೂರ್ವ ದ್ವಾರದಿಂದ (ಕೆ.ಹೆಚ್. ವೃತ್ತದಿಂದ) ದಲಾಲ್ ಪೆಟ್ರೋಲ್ ಬಂಕ್‌ವರೆಗೆ ವಾಹನ ನಿಲುಗಡೆಯನ್ನು ನಿಷೇಧಿಸಿ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವುದು ಅವಶ್ಯಕವಾಗಿ ಕಂಡುಬಂದಿರುತ್ತೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ, ಎಸ್. ಮರಿಸ್ವಾಮಿ, ಐ.ಪಿ.ಎಸ್. ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಕೆಂಗಲ್ ಹನುಮಂತಯ್ಯ ರಸ್ತೆಯಲ್ಲಿ ಲಾಲ್‌ಭಾಗ್ ಪೂರ್ವ ದ್ವಾರದಿಂದ (ಕೆ.ಹೆಚ್. ವೃತ್ತದಿಂದ) ದಲಾಲ್ ಪೆಟ್ರೋಲ್ ಬಂಕ್‌ವರೆಗೆ ವಾಹನ ನಿಲುಗಡೆಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

"ಕೆಂಗಲ್ ಹನುಮಂತಯ್ಯ ಜೋಡಿ ರಸ್ತೆಯಲ್ಲಿ ಲಾಲ್‌ಭಾಗ್ ಪೂರ್ವ ದ್ವಾರದಿಂದ (ಕೆ.ಹೆಚ್. ವೃತ್ತದಿಂದ) ದಲಾಲ್ ಪೆಟ್ರೋಲ್ ಬಂಕ್‌ವರೆಗೆ ದಿನದ 24 ಗಂಟೆಗಳ ಕಾಲ ವಾಹನ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ"

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 14.05.2005ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 30.04.2005 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್.714 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು

## ಅಧಿಸೂಚನೆ

**ಸಂಖ್ಯೆ:ವೈಶಿನಿ/ ಎನ್‌ಆರ್‌ಸಿ(2)/ 2005-06, ದಿನಾಂಕ: 6ನೇ ಮೇ, 2005**

**ವಿಷಯ:** 2005-06ನೇ ಸಾಲಿನ ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಶುಶ್ರೂಷಾ ತರಬೇತಿ ಕೋರ್ಸಿನ ಪ್ರವೇಶಕ್ಕಾಗಿ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

1. ಈ ಕೆಳಗೆ ನಮೂದಿಸಿರುವ (ಅನುಬಂಧ-1ರಲ್ಲಿ) 11 ಸರ್ಕಾರಿ ಶುಶ್ರೂಷಾ ತರಬೇತಿಗೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಗಳನ್ನು ಸಂಬಂಧಿಸಿದ ಅಂದರೆ, ನೀವು ಅರ್ಜಿ ಹಾಕಲಿಚ್ಛಿಸುವ ಸಂಸ್ಥೆಯ ಅಧೀಕ್ಷಕರು/ ಪ್ರಾಂಶುಪಾಲರುಗಳಿಂದ ದಿನಾಂಕ: 20.05.2005 ತರುವಾಯ ಅರ್ಜಿ ಶುಲ್ಕ ರೂ.100/- (ಪಜಾ/ ಪಪಂ. ವರ್ಗ-1ಕ್ಕೆ ರೂ.50/-) ಗಳನ್ನು ಡಿ.ಡಿ. ಮೂಲಕ ಸಂದಾಯ ಮಾಡಿ ನಿಯಮಿತ ಅರ್ಜಿಯನ್ನು ಪಡೆದು ನೀವು ಆಯ್ಕೆ ಬಯಸುವ ಶುಶ್ರೂಷಾ ಶಾಲೆಗೆ ನೇರವಾಗಿ ಸಲ್ಲಿಸತಕ್ಕದ್ದು.

- ಅಂಚೆ ಮೂಲಕ ಅರ್ಜಿಯನ್ನು ಪಡೆಯ ಬಯಸುವವರು ಅರ್ಜಿ ಶುಲ್ಕ ರೂ.100/- (ಪ.ಜಾ/ ಪ.ಪಂ., ವರ್ಗ-1ಕ್ಕೆ ರೂ.50/-)ರ ಡಿ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದು, ಜೊತೆಗೆ ಸ್ವವಿಳಾಸವಿರುವ 30x12 ರ ಲಕೋಟೆಗೆ (ಈಗಿರುವ ಅಂಚೆ ದರದಂತೆ) ಅಂಚೆ ಚೀಟಿ ಹಚ್ಚಿ ನೀವು ಆಯ್ಕೆ ಬಯಸುವ ಸಂಸ್ಥೆಯ ಅಧೀಕ್ಷಕರುಗಳಿಗೆ ಕಳುಹಿಸಿ ಅರ್ಜಿಯನ್ನು ಪಡೆಯ ಬಹುದಾಗಿದೆ.
- ಡಿ.ಡಿ.ಯಾಗಲಿ ಅಥವಾ ಅರ್ಜಿಯನ್ನಾಗಲಿ ಯಾವುದೇ ಕಾರಣಕ್ಕೂ ಈ ನಿರ್ದೇಶನಾಲಯಕ್ಕೆ ಕಳುಹಿಸಬಾರದು. ಒಂದು ವೇಳೆ ಕಳುಹಿಸಿದಲ್ಲಿ ಅಂಥಹವುಗಳನ್ನು ತಿರಸ್ಕರಿಸಲಾಗುವುದು.

2. ಸರ್ಕಾರದ ಅಧಿಸೂಚನೆ ಸಂಖ್ಯೆ ಆಕುಕ 44 ಎಂಪಿಎಸ್ 2003(3) ದಿನಾಂಕ: 03.07.2003ರ ಪ್ರಕಾರ ಅಭ್ಯರ್ಥಿಗಳು ಶುಶ್ರೂಷಾ ತರಬೇತಿಗೆ ಅರ್ಜಿ ಸಲ್ಲಿಸಲು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

- ಅಭ್ಯರ್ಥಿಯ ವಯಸ್ಸು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು 17 ವರ್ಷಗಳು ತುಂಬಿರಬೇಕು. ಹಾಗೂ 35 ವರ್ಷ ಮೀರಿರಬಾರದು.
- **ವಿದ್ಯಾರ್ಹತೆ:** ಅಭ್ಯರ್ಥಿಯು ಪದವಿಪೂರ್ವ ಶಿಕ್ಷಣ (ದ್ವಿತೀಯ ಪಿಯುಸಿ) ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.
- ಅಭ್ಯರ್ಥಿಗಳು 1ನೇ ತರಗತಿಯಿಂದ 12ನೇ ತರಗತಿಯವರೆಗೆ ಕನಿಷ್ಟ 7 ವರ್ಷಗಳು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಹಾಗೂ 10 ರಿಂದ 12ನೇ ತರಗತಿ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರಬೇಕು. ಅದಕ್ಕೆ ಸಂಬಂಧಿಸಿದ ವ್ಯಾಸಂಗ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.
- ಅಭ್ಯರ್ಥಿಗಳು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಪ್ರಥಮ ಹಾಗೂ ದ್ವಿತೀಯ ಪಿಯುಸಿ ಅಥವಾ ಅದಕ್ಕೆ ತತ್ಸಮಾನವಾದ ವ್ಯಾಸಂಗವನ್ನು ಮಾಡಿರಬೇಕು. ಅಥವಾ ಅಭ್ಯರ್ಥಿಯ ಪೋಷಕರು ಕರ್ನಾಟಕ ರಾಜ್ಯದಲ್ಲಿ ಕನಿಷ್ಟ 7 ವರ್ಷಗಳು ವ್ಯಾಸಂಗ ಮಾಡಿರುವ ಬಗ್ಗೆ ಮಾಹಿತಿ ನೀಡತಕ್ಕದ್ದು.
- **ತರಬೇತಿಯ ಅವಧಿ:** ಶುಶ್ರೂಷಾ ತರಬೇತಿಯ ಅವಧಿಯು ಮೂರು ವರ್ಷಗಳಾಗಿದ್ದು, ಸರ್ಕಾರಿ ನಿಯಮಗಳ ಪ್ರಕಾರ, ಸರ್ಕಾರಿ ಶುಶ್ರೂಷಾ ಶಾಲೆಗಳಲ್ಲಿ ವಿದ್ಯಾರ್ಥಿಗಳು ಶಿಷ್ಯವೇತನ ಪಡೆಯಲು ಅರ್ಹರಾಗಿರುತ್ತಾರೆ.

3. ತರಬೇತಿಗೆ ಗರ್ಭಿಣಿ ಅಭ್ಯರ್ಥಿಗಳಿಗೆ ಪ್ರವೇಶಕ್ಕೆ ಅವಕಾಶವಿರುವುದಿಲ್ಲ.

4. ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು ಇಲಾಖಾ ಅಧಿಕಾರಿಗಳ ಮುಖಾಂತರ (ಹುದ್ದೆಗೆ ನೇಮಕಾತಿ ಮಾಡುವ ಅಧಿಕಾರವುಳ್ಳವರಿಂದ) ಅರ್ಜಿಗಳನ್ನು ಸಲ್ಲಿಸಬೇಕು.

- ಅರ್ಜಿಯನ್ನು ಹಾಕಲಿಚ್ಛಿಸುವ ಇಲಾಖಾ ಅಭ್ಯರ್ಥಿಗಳು (ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ 48 ವರ್ಷಗಳು ಮೀರಿರಬಾರದು.
- ಅರ್ಜಿದಾರರ ಹಿಂದಿನ ಹುದ್ದೆಗೆ ಬಾಂಡ್ ಅವಧಿ ಮುಗಿದು 5 ವರ್ಷಕ್ಕೆ ಕಡಿಮೆಯಿಲ್ಲದೇ ಸರ್ಕಾರಿ ಸೇವೆ ಸಲ್ಲಿಸಿರಬೇಕು, ಮತ್ತು ಖಾಯಂ ಪೂರ್ವಾವಧಿ ಘೋಷಣೆಯಾಗಿರಬೇಕು.

➢ ಅರ್ಜಿದಾರರು ತಮ್ಮ ವಿರುದ್ಧ ಯಾವುದೇ ರೀತಿಯ ಇಲಾಖಾ ವಿಚಾರಣೆ ಬಾಕಿ ಇಲ್ಲವೆಂದು ತಮ್ಮ ಮೇಲಾಧಿಕಾರಿಗಳಿಂದ ದೃಢೀಕರಣ ಪಡೆದು ಅರ್ಜಿಯೊಂದಿಗೆ ಲಗತ್ತಿಸುವುದು.

➢ ಈ ಮೇಲಿನ ಎಲ್ಲಾ ಮಾಹಿತಿಯೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಇಲಾಖಾ ಮುಖ್ಯಸ್ಥರ ಮುಖಾಂತರ ಈ ನಿರ್ದೇಶನಾಲಯಕ್ಕೆ ನಿಗದಿತ ದಿನಾಂಕದೊಳಗೆ ತಲುಪುವಂತೆ ಕಳುಹಿಸತಕ್ಕದ್ದು.

5. ಪ್ರತಿಯೊಂದು ಶುಶ್ರೂಷಾ ಶಾಲೆಗಳಲ್ಲಿರುವ ಒಟ್ಟು ತರಬೇತಿ ಸ್ಥಾನಗಳ ಪೈಕಿ ಶೇಕಡಾ 5ರಷ್ಟು ಪುರುಷ ಅಭ್ಯರ್ಥಿಗಳಿಗೆ ಆಯಾ ವರ್ಗಕ್ಕೆ ಅನುಸಾರವಾಗಿ 19 ಸ್ಥಾನಗಳನ್ನು ಮೀಸಲಿರಿಸಲಾಗಿದೆ.

➢ ಮಾಜಿ ಸೈನಿಕರ ಮಕ್ಕಳಿಗೆ ಶೇಕಡಾ 1ರಂತೆ ನಾಲ್ಕು ಸ್ಥಾನಗಳನ್ನು ಮೀಸಲಿರಿಸಲಾಗಿದೆ.

➢ ದ್ವಿತೀಯ ಪಿ.ಯು.ಸಿ. ಯಲ್ಲಿ ಉತ್ತೀರ್ಣರಾದ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ಒಟ್ಟು ತರಬೇತಿ ಸ್ಥಾನಗಳಲ್ಲಿ ಶೇಕಡಾ 5ರಂತೆ 19 ಸ್ಥಾನಗಳನ್ನು ಮೀಸಲಿರಿಸಲಾಗಿದೆ.

6. ಹೊರನಾಡ ಕನ್ನಡಿಗರು/ ಗಡಿನಾಡ ಕನ್ನಡಿಗರು ಅರ್ಜಿ ಸಲ್ಲಿಸಬಹುದಾಗಿದೆ. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಸಾಮಾನ್ಯ ಕನ್ನಡ ಓದಲು ಬರೆಯಲು ಬರಬೇಕು. ತರಬೇತಿ ಆಯ್ಕೆಗೆ ಮುನ್ನ ಕನ್ನಡ ಪರೀಕ್ಷೆ ನಡೆಸಲಾಗುವುದು.

7. ಮಹಿಳಾ ಅಭ್ಯರ್ಥಿಗಳಿಗೆ ಸರ್ಕಾರದ 11 ನರ್ಸಿಂಗ್ ಶಾಲೆಗಳಲ್ಲಿ ಆಯಾ ವರ್ಗಕ್ಕೆ ತಕ್ಕಂತೆ ಎಲ್ಲಾ ಪ್ರವರ್ಗಕ್ಕೆ ಸರ್ಕಾರಿ ಆದೇಶದನುಸಾರ ಮೀಸಲಿಡಲಾಗಿದೆ. (ಅನುಬಂಧ-IIರಲ್ಲಿ ವಿವರಿಸಿದೆ)

8. ಅರ್ಜಿ ಹಾಕಲಿಚ್ಛಿಸುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಿ.ಯು.ಸಿ. ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಜನ್ಮ ದಿನಾಂಕದ ದೃಢೀಕರಣ ಪತ್ರ (ಟಿ.ಸಿ.) ಇತ್ತೀಚಿನ ದೇಹ ಧಾರ್ಢ್ಯತೆ ಪ್ರಮಾಣ ಪತ್ರ, ಜಾತಿ ಹಾಗೂ ಆದಾಯ ಪ್ರಮಾಣ ಪತ್ರ (ತಹಶೀಲ್ದಾರರಿಂದ ಪ್ರಮಾಣೀಕರಿಸಿರಬೇಕು) ಇತ್ತೀಚಿನ ಭಾವಚಿತ್ರವನ್ನು ಅರ್ಜಿಯೊಂದಿಗೆ ಕಡ್ಡಾಯವಾಗಿ ಲಗತ್ತಿಸಿರಬೇಕು.

➢ ಅರ್ಜಿಯನ್ನು ಸ್ವಂತ ಬರವಣಿಗೆಯಿಂದ ಕನ್ನಡ ಭಾಷೆಯಲ್ಲಿ ಭರ್ತಿ ಮಾಡಬೇಕು.

➢ ಎಲ್ಲಾ ರೀತಿಯಿಂದ ಕ್ರಮವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಪ್ರಮಾಣ ಪತ್ರಗಳ ನಕಲುಗಳೊಂದಿಗೆ ಅರ್ಜಿ ಪಡೆದ ಶುಶ್ರೂಷಾ ಶಾಲೆಗಳ ವಿಳಾಸಕ್ಕೆ ನಿಗದಿಪಡಿಸಿದ ದಿನಾಂಕದೊಳಗೆ ಅರ್ಜಿಗಳು ತಲುಪುವಂತೆ ಕಳುಹಿಸತಕ್ಕದ್ದು.

9. ಅರ್ಜಿ ಫಾರಂಗಳನ್ನೊಳಗೊಂಡ ಲಕೋಟೆಯ ಮೇಲೆ 2005ನೇ ಸಾಲಿಗೆ ಶುಶ್ರೂಷಾ ತರಬೇತಿ ಕೋರ್ಸಿನ ಪ್ರವೇಶಕ್ಕಾಗಿ ಅರ್ಜಿ ಎಂಬುದಾಗಿ ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು.

10. ಇಲಾಖಾ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಮೇಲಾಧಿಕಾರಿಗಳ ಮೂಲಕ **ದಿನಾಂಕ: 01.06.2005ರೊಳಗಾಗಿ** ಈ ನಿರ್ದೇಶನಾಲಯಕ್ಕೆ ತಲುಪುವಂತೆ ಕ್ರಮ ವಹಿಸತಕ್ಕದ್ದು.

➢ ಮಾಜಿ ಸೈನಿಕರ ಮಕ್ಕಳ ಮೀಸಲಿರಿಸಿರುವ ಸ್ಥಾನಕ್ಕೆ ಸಲ್ಲಿಸಿದ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳು **ದಿನಾಂಕ: 01.06.2005ರ** ಒಳಗಾಗಿ ಈ ನಿರ್ದೇಶನಾಲಯಕ್ಕೆ ಕಳುಹಿಸತಕ್ಕದ್ದು.

11. ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆದಾಗ ಅವರುಗಳಿಗೆ ಸ್ಥಳ ಮತ್ತು ದಿನಾಂಕವನ್ನು ತಿಳಿಸಲಾಗುವುದು. ಸಂದರ್ಶನಕ್ಕೆ ಅವರವರ ಸ್ವಂತ ರಜೆ ಮತ್ತು ಖರ್ಚಿನಲ್ಲಿ ಹಾಜರಾಗತಕ್ಕದ್ದು. ಪಿ.ಯು.ಸಿ./ ಎಸ್.ಎಸ್.ಎಲ್.ಸಿ. ಜನ್ಮ ದಿನಾಂಕದ ದೃಢೀಕರಣ ಪತ್ರ (ಟಿ.ಸಿ.) ಇತ್ತೀಚಿನ ದೇಹ ಧಾರ್ಢ್ಯತೆ ಪ್ರಮಾಣ ಪತ್ರ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನದ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

12. ತರಬೇತಿಯನ್ನು ಪೂರ್ಣಗೊಳಿಸಿದ ಎಲ್ಲಾ ಅಭ್ಯರ್ಥಿಗಳಿಗೆ ಸರ್ಕಾರದಲ್ಲಿ ಸೇವೆ ಸಲ್ಲಿಸಲು ನೇಮಕ ಮಾಡಿಕೊಳ್ಳುವ ಖಾತರಿ ನೀಡುವುದಿಲ್ಲ. ತರಬೇತಿ ಅವಧಿಯಲ್ಲಿ ಶಿಷ್ಯವೇತನವನ್ನು ಪಡೆಯುವುದರಿಂದ ಇಬ್ಬರು ಖಾಯಂ ರಾಜ್ಯ ಸರ್ಕಾರಿ ನೌಕರರ ಜಾಮೀನಿನಿಂದ ಕೂಡಿದ ಬಂಧಪತ್ರ ಸಲ್ಲಿಸಬೇಕು.

13. ಕೊನೆಯ ದಿನಾಂಕದ ನಂತರ ಬರುವ ಅಥವಾ ಅಪೂರ್ಣವಾದ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು. ಈ ಸಂಬಂಧದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ. ತರಬೇತಿಗೆ ಸಂಬಂಧಪಟ್ಟ ಹೆಚ್ಚಿನ ವಿವರಗಳನ್ನು ಶುಶ್ರೂಷಾ ಶಾಲೆಯ ಮುಖ್ಯಸ್ಥರಿಂದ ಎಲ್ಲಾ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆಯಬಹುದು.

➢ ಶುಶ್ರೂಷಾ ತರಬೇತಿ ಶಾಲೆಗಳಲ್ಲಿ ಅರ್ಜಿಗಳನ್ನು ಪಡೆಯಲು ಕೊನೆಯ ದಿನಾಂಕ: **31.05.2005ರ** ಸಂಜೆ 4.00 ಗಂಟೆಯವರೆಗೆ.

➢ ಭರ್ತಿ ಮಾಡಿದ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳಲ್ಲಿ ಸಲ್ಲಿಸಲು ಕೊನೆಯ ದಿನಾಂಕ: **01.06.2005ರ** ಸಂಜೆ 4.00 ಗಂಟೆಯವರೆಗೆ.

14. ಈ ಮೂಲಕ ಎಲ್ಲಾ ವಿವರಗಳೊಂದಿಗೆ ಭರ್ತಿ ಮಾಡಿದ ಅರ್ಜಿಯನ್ನು ನಿಗದಿತ ದಿನಾಂಕದೊಳಗೆ ನೀವು ಸೇರಲಿಚ್ಛಿಸುವ ಶುಶ್ರೂಷಾ ಶಾಲೆಗೆ ಕಳುಹಿಸತಕ್ಕದ್ದು.

ವೈದ್ಯಕೀಯ ಶಿಕ್ಷಣ ನಿರ್ದೇಶಕರು.

**ಅನುಬಂಧ-2**

**ಸರ್ಕಾರಿ ಆದೇಶ ಸಂಖ್ಯೆ: ಸಕಇ/ 222/ ಬಿಸಿಎ/ 20.09.94 ಮತ್ತು ಸಂಖ್ಯೆ: ಸಕಇ/ 225/ ಬಿಸಿಎ/ 2000 ದಿನಾಂಕ: 30.03.02**

| ಸಂ. | ತರಬೇತಿ ಶಾಲೆ ಹೆಸರು | ಪ್ರವೇಶ ಮಿತಿ | ಮಾಜಿ ಸೈನಿಕರ ಮಕ್ಕಳ ಮೀಸಲು ಸ್ಥಾನ 1% | ಪುರುಷ ಅಭ್ಯರ್ಥಿಗಳ ಮೀಸಲು ಸ್ಥಾನ 5% | ವರ್ಗಕ್ಕನು ಸಾರವಾಗಿ | ಇಲಾಖಾ ಅಭ್ಯರ್ಥಿಗಳ ಮೀಸಲು ಸ್ಥಾನ 5% | ಮಹಿಳಾ ಅಭ್ಯರ್ಥಿಗಳ ಮೀಸಲು ಸ್ಥಾನ | ಆಯಾ ವರ್ಗಕ್ಕನುಸಾರವಾಗಿ | | | | | | | |
|---|---|---|---|---|---|---|---|---|---|---|---|---|---|---|---|
| | | | | | | | | GM | I | 2A | 2B | 3A | 3B | SC | ST |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 |
|---|---|---|---|---|---|---|---|---|---|---|---|---|---|---|---|
| 1. | ಬೌರಿಂಗ್ ಆಸ್ಪತ್ರೆ, ಬೆಂಗಳೂರು. | 40 | - | 2 | 2A/ GM | 2 | 36 | 18 | 2 | 5 | 1 | 2 | 2 | 5 | 1 |
| 2. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು. | 45 | - | 2 | 2B/ GM | 2 | 41 | 20 | 2 | 6 | 2 | 2 | 2 | 6 | 1 |
| 3. | ಕೆ.ಆರ್. ಆಸ್ಪತ್ರೆ, ಮೈಸೂರು | 45 | - | 2 | 3A/GM | 2 | 41 | 20 | 2 | 6 | 2 | 2 | 2 | 6 | 1 |
| 4. | ಕೆ.ಎಂ.ಸಿ. ಆಸ್ಪತ್ರೆ, ಹುಬ್ಬಳ್ಳಿ. | 45 | - | 2 | 3B/GM | 2 | 41 | 20 | 2 | 6 | 2 | 2 | 2 | 6 | 1 |
| 5. | ವೆನ್‌ಲಾಕ್ ಆಸ್ಪತ್ರೆ, ಮಂಗಳೂರು. | 35 | 1 | 2 | SC/GM | 2 | 30 | 15 | 1 | 5 | 1 | 1 | 1 | 5 | 1 |
| 6. | ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ. | 35 | 1 | 2 | ST/GM | 2 | 30 | 15 | 1 | 5 | 1 | 1 | 1 | 5 | 1 |
| 7. | ಜಿಲ್ಲಾ ಆಸ್ಪತ್ರೆ, ಬೆಳಗಾಂ. | 35 | 1 | 2 | Cat I/ GM | 2 | 30 | 15 | 1 | 5 | 1 | 1 | 1 | 5 | 1 |
| 8. | ಜಿಲ್ಲಾ ಆಸ್ಪತ್ರೆ, ಬಳ್ಳಾರಿ. | 30 | 1 | 2 | SC/GM | 2 | 25 | 12 | 1 | 4 | 1 | 1 | 1 | 4 | 1 |
| 9. | ಜಿಲ್ಲಾ ಆಸ್ಪತ್ರೆ, ಬಿಜಾಪುರ. | 30 | - | 1 | GM | 1 | 28 | 14 | 1 | 4 | 1 | 1 | 2 | 4 | 1 |
| 10. | ಸಿ.ಜಿ. ಆಸ್ಪತ್ರೆ, ದಾವಣಗೆರೆ. | 30 | - | 1 | 2A | 1 | 28 | 14 | 1 | 4 | 1 | 1 | 2 | 4 | 1 |
| 11. | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ. | 20 | - | 1 | GM | 1 | 18 | 9 | 1 | 2 | 1 | 1 | 1 | 2 | 1 |
| | | **390** | **4** | **19** | | **19** | **348** | **172** | **15** | **52** | **14** | **15** | **17** | **52** | **11** |

ಪುರುಷ ಅಭ್ಯರ್ಥಿಗಳಿಗೆ-5%

ಇಲಾಖಾ ಅಭ್ಯರ್ಥಿಗಳಿಗೆ (ಎ.ಎನ್.ಎಮ್) -5%

ಮಾಜಿ ಸೈನಿಕರ ಮಕ್ಕಳಿಗೆ-1%

ಪಿ.ಆರ್.738 ವೈದ್ಯಕೀಯ ಶಿಕ್ಷಣ ನಿರ್ದೇಶಕರು.

**ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-5, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು-29**

**ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ/ಸಿಆರ್-7/ 2005, ದಿನಾಂಕ: 26ನೇ ಏಪ್ರಿಲ್, 2005**

**ಅರ್ಜಿದಾರರು:**

1. ಶ್ರೀ ಗೋವಿಂದಪ್ಪ, ಬಿನ್ ಮೂಡಲಪ್ಪ
2. ಶ್ರೀಮತಿ ನಂಜಮ್ಮ ಕೋಂ ಗೋವಿಂದಪ್ಪ
3. ಶ್ರೀನಿವಾಸ ಬಿನ್ ಗೋವಿಂದಪ್ಪ,
   ವಾಸ: ವೀರಸಾಗರ ವಿಲೇಜ್, ಕುದೂರು ಹೋಬಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ.

**ಪ್ರತಿವಾದಿಗಳು:**

1. ಶ್ರೀ ಉಮಾಶಂಕರ್, ಬಿನ್ ಮಲ್ಲೇಶಯ್ಯ,
   ಕೊಂಡಹಳ್ಳಿ, ಮಾಗಡಿ ತಾಲ್ಲೂಕು, ಬೆಂಗಳೂರು ಜಿಲ್ಲೆ.
2. ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ನಂ.339, 1ನೇ ಮಹಡಿ, 11ನೇ ಕ್ರಾಸ್ ಹತ್ತಿರ, ಸಂಪಿಗೆ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-03.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 21.04.05 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, 1 ಹಾಗೂ 2ನೇ ಅರ್ಜಿದಾರರ ಮಗ ಮತ್ತು 3ನೇ ಅರ್ಜಿದಾರರ ಅಣ್ಣ ಶ್ರೀ ವೆಂಕಟೇಶ್ ಇವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಪ್ರತಿವಾದಿಯ ವಿರುದ್ಧ ಕ್ರಮ ತೆಗೆದುಕೊಂಡು ತಮಗೆ ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದ ನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಎನ್.ಬಿ. ರಾಮಚಂದ್ರ
ಕಾರ್ಮಿಕ ಪರಿಹಾರ ಆಯುಕ್ತರು ಹಾಗೂ
ಕಾರ್ಮಿಕ ಅಧಿಕಾರಿ ಉಪ ವಿಭಾಗ-5, ಬೆಂಗಳೂರು-560 029.

ಪಿ.ಆರ್.696

## ಕರ್ನಾಟಕ ಲೋಕಸೇವಾ ಆಯೋಗ ಬೆಂಗಳೂರು

**ವಿಷಯ:** 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಡಿ.ಡಿ. ಹಗೆದಾಳ ಮತ್ತು ಶ್ರೀ ಬಸವರಾಜ ಎಸ್. ಗೌಡರ ಇವರುಗಳು ಎಸಗಿದ ದುರಾಚಾರ- ದಂಡನೆ ವಿಧಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಡಿ.ಡಿ. ಹಗೆದಾಳ ಇವರ ಅರ್ಜಿ ದಿನಾಂಕ: 05.10.2004.
2. 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗೆ ಶ್ರೀ ಬಸವರಾಜ ಎಸ್. ಗೌಡರ ಇವರ ಅರ್ಜಿ ದಿನಾಂಕ: 14.10.2004.
3. ಶ್ರೀ ಡಿ.ಡಿ. ಹಗೆದಾಳ ಮತ್ತು ಶ್ರೀ ಬಸವರಾಜು ಎಸ್. ಗೌಡರ ಇವರುಗಳಿಗೆ ಜಾರಿಮಾಡಿದ ಕಾರಣ ಕೇಳುವ ನೋಟೀಸು ಸಂಖ್ಯೆ: ಆರ್‌ಹೆಚ್‌ಎಸ್ 284/2004-05/ ಪಿಎಸ್‌ಸಿ ದಿನಾಂಕ: 15.01.2005.
4. ಶ್ರೀ ಡಿ.ಡಿ. ಹಗೆದಾಳ ಇವರು ನೀಡಿದ ದಿನಾಂಕ: 22.01.2005ರ ಹೇಳಿಕೆ ಪತ್ರ.

**ಪ್ರಸ್ತಾವನೆ:**

ಕರ್ನಾಟಕ ಲೋಕಸೇವಾ ಆಯೋಗವು ನಡೆಸಿದ 2004ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಶ್ರೀ ಡಿ.ಡಿ. ಹಗೆದಾಳ (ನೋಂದಣಿ ಸಂಖ್ಯೆ: 15327) ದ್ವಿತೀಯ ದರ್ಜೆ ಸಹಾಯಕ ಪುರಸಭೆ, ಮಹಾಲಿಂಗಪುರ, ಮುದೋಳ (ತಾ) ಬಾಗಲಕೋಟೆ ಜಿಲ್ಲೆ ಮತ್ತು ಶ್ರೀ ಬಸವರಾಜ ಎಸ್. ಗೌಡರ, (ನೋಂದಣಿ ಸಂಖ್ಯೆ: 15198) ಮೀಸಲು ಪೊಲೀಸ್ ಪೇದೆ-282, ದರ್ಗ ನವನಗರ, ಬಾಗಲಕೋಟೆ ಜಿಲ್ಲೆ ಇವರುಗಳು ಜನರಲ್ ಲಾ ಭಾಗ-1ರ ವಿಷಯದ ಪರೀಕ್ಷೆ ಬರೆಯಲು ಅರ್ಜಿ ಸಲ್ಲಿಸಿದ್ದು, ಆ ಪರೀಕ್ಷೆಯ ಪತ್ರಿಕೆ-1ಕ್ಕೆ, ಅವರು ದಿನಾಂಕ: 02.12.2004ರಂದು ಸರ್ಕಾರಿ ಬಾಲಕಿಯರ ಪದವಿಪೂರ್ವ ಕಾಲೇಜು, ಬಾಗಲಕೋಟೆ ಪರೀಕ್ಷಾ ಕೇಂದ್ರದಲ್ಲಿ ಹಾಜರಾಗಿದ್ದು, ಪರೀಕ್ಷಾ ಸಮಯದಲ್ಲಿ ಬಾಗಲಕೋಟೆಯ ಉಪವಿಭಾಗಾಧಿಕಾರಿಗಳು ತಪಾಸಣೆ ನಡೆಸಲು ಸದರಿ ಪರೀಕ್ಷಾ ಕೇಂದ್ರಕ್ಕೆ ಭೇಟಿ ನೀಡಿದ್ದಾಗ ಅಭ್ಯರ್ಥಿ ಶ್ರೀ ಹಗೆದಾಳ, ಇವರು ಪರೀಕ್ಷಾ ಕೊಠಡಿಯಲ್ಲಿ ಚೂಯಿಂಗ್‌ಗಮ್ ಅಗಿಯುತ್ತಿದ್ದುದನ್ನು ಗಮನಿಸಿ ಅವರ ಸೂಚನೆಯ ಮೇರೆಗೆ ಆ ಅಭ್ಯರ್ಥಿಯ ಉತ್ತರಪತ್ರಿಕೆ ಮತ್ತು ಪ್ರವೇಶಪತ್ರವನ್ನು ವಶಪಡಿಸಿಕೊಳ್ಳಲಾಯಿತೆಂದು ಮತ್ತು ಇನ್ನೊಬ್ಬ ಅಭ್ಯರ್ಥಿ ಕಾಪಿ ಮಾಡಲು ಫೋಟೊ ಪ್ರತಿಯೊಂದನ್ನು ಕೊಠಡಿಯ ಕಿಟಕಿಯ ಮೂಲಕ ಅವರ ಪರಿಚಯದ ವ್ಯಕ್ತಿಯೊಬ್ಬರಿಂದ ಪಡೆಯುತ್ತಿದ್ದನ್ನು ಉಪ ವಿಭಾಗಾಧಿಕಾರಿಯು ಗಮನಿಸಿದ್ದು ಅವರ ಸೂಚನೆಯಂತೆ ಆ ಅಭ್ಯರ್ಥಿಯನ್ನು ಪರೀಕ್ಷಾ ಕೊಠಡಿಯಿಂದ ಹೊರಹಾಕಲಾಯಿತೆಂದು ಪರೀಕ್ಷಾಕೇಂದ್ರದ ಮುಖ್ಯಪರಿವೀಕ್ಷಕರು ಆಯೋಗಕ್ಕೆ ವರದಿ ಸಲ್ಲಿಸಿರುತ್ತಾರೆ.

ಇಲಾಖಾ ಪರೀಕ್ಷೆಗಳನ್ನು ಬರೆಯಲು ಅಭ್ಯರ್ಥಿಗಳಿಗೆ ನೀಡಿದ ಪ್ರವೇಶ ಪತ್ರಗಳ ಹಿಂಬದಿಯಲ್ಲಿ ಮುದ್ರಿಸಿರುವ 'ಅಭ್ಯರ್ಥಿಗಳಿಗೆ ಸೂಚನೆಗಳು' ಇದರಲ್ಲಿ ಇತರೆ ಸೂಚನೆಗಳೊಂದಿಗೆ ಪರೀಕ್ಷಾ ಕೊಠಡಿಯಲ್ಲಿ ಕಾಫಿ, ಟೀ ಕುಡಿಯುವುದು ಧೂಮಪಾನ ಮಾಡುವುದು; ಅನಧಿಕೃತ ಪುಸ್ತಕಗಳು, ಟಿಪ್ಪಣಿಗಳು, ಚೀಟಿಗಳನ್ನು ಅಥವಾ ಪೇಪರ್‌ಗಳನ್ನು ತರುವುದು ನಿಷೇಧಿಸಲಾಗಿದೆಯೆಂದು ತಿಳಿಸಿದ್ದರೂ ಸಹ ಆ ಸೂಚನೆಗಳನ್ನು ಶ್ರೀ ಹಗೆದಾಳ್ ಮತ್ತು ಶ್ರೀ ಬಸವರಾಜು ಎಸ್. ಗೌಡರ ಇವರುಗಳು ಮೇಲೆ ವಿವರಿಸಿರುವಂತೆ ಉಲ್ಲಂಘಿಸಿ ದುರಾಚಾರ ಎಸಗಿರುತ್ತಾರೆ. ಆದಕಾರಣ ಪರೀಕ್ಷಾ ಕೇಂದ್ರದ ಮುಖ್ಯ ಪರಿವೀಕ್ಷಕರು ಆಯೋಗಕ್ಕೆ ಸಲ್ಲಿಸಿದ ವರದಿ ಮತ್ತು ಸಂಬಂಧಿಸಿದ ದಾಖಲೆಗಳನ್ನು ಆಧರಿಸಿ ಸದರಿ ಇಬ್ಬರು ಅಭ್ಯರ್ಥಿಗಳಿಗೆ ಮೇಲೆ (3)ರಲ್ಲಿ ಓದಲಾಗಿರುವ ಕಾರಣ ಕೇಳುವ ನೋಟೀಸುಗಳನ್ನು ಜಾರಿ ಮಾಡಿ ಅದರಲ್ಲಿ ತಿಳಿಸಿರುವ ದಂಡನೆಯನ್ನು ಏಕೆ ವಿಧಿಸಬಾರದು ಎಂಬ ಬಗ್ಗೆ ಲಿಖಿತ ಸಮಜಾಯಿಷಿಯನ್ನು ನೀಡುವಂತೆ ಸೂಚಿಸಲಾಯಿತು. ಶ್ರೀ ಹಗೆದಾಳ ಇವರು ದಿನಾಂಕ: 22.01.2005ರ ಪತ್ರದಲ್ಲಿ ಕಾರಣ ಕೇಳುವ ನೋಟಿಸಿಗೆ ಉತ್ತರವನ್ನು ನೀಡುತ್ತಾ ತಾನು ಪರೀಕ್ಷೆ ಬರೆಯುವಾಗ ಚುಯಿಂಗಮ್ ಅಗಿದಿರುವುದು ತಪ್ಪಾಗಿದೆಯೆಂದು ತಿಳಿಸಿ ಕ್ಷಮೆ ಕೋರಿರುತ್ತಾರೆ. ಆದರೆ ಶ್ರೀ ಬಸವರಾಜ ಎಸ್. ಗೌಡರ ಇವರು ಕಾರಣ ಕೇಳುವ ನೋಟೀಸನ್ನು ಸ್ವೀಕರಿಸಿದ್ದರೂ ಯಾವುದೇ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ.

ಒಬ್ಬ ಅಭ್ಯರ್ಥಿಯು ತನ್ನ ತಪ್ಪನ್ನು ಒಪ್ಪಿಕೊಂಡು ಕ್ಷಮೆ ಯಾಚಿಸಿದ್ದು ಮತ್ತೊಬ್ಬ ಅಭ್ಯರ್ಥಿಯು ಇದುವರೆಗೆ ಯಾವುದೇ ಹೇಳಿಕೆಯನ್ನು ನೀಡದೆ ಇರುವುದರಿಂದ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಿ ಅದರ ಆಧಾರದ ಮೇಲೆ ಆಯೋಗವು ಕೆಳಕಂಡಂತೆ ಆದೇಶ ಮಾಡಿದೆ.

**ಆದೇಶ ಸಂಖ್ಯೆ: ಇ.ಪ.(1)625/ 2005-06/ ಪಿಎಸ್‌ಸಿ ದಿನಾಂಕ: 29ನೇ ಏಪ್ರಿಲ್, 2005**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆ ನಡೆಸುವಿಕೆ) ನಿಯಮಾವಳಿಗಳು 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಾಪತ್ರ ಸಂಖ್ಯೆ ಆಡಳಿತ 39/93-94/ ಪಿಎಸ್‌ಸಿ ದಿನಾಂಕ: 14.09.1993ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿಗಳಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಿದೆ:

1) ಶ್ರೀ ಡಿ.ಡಿ. ಹಗೆದಾಳ (ನೋಂದಣಿ ಸಂಖ್ಯೆ: 15327) ದ್ವಿ.ದ.ಸಹಾಯಕ ಪುರಸಭೆ, ಮಹಾಲಿಂಗಪೂರ ಮುಧೋಳ್ (ತಾ), ಬಾಗಲಕೋಟೆ ಜಿಲ್ಲೆ, ಇವರಿಗೆ ಇನ್ನುಮುಂದೆ ಇಂತಹಾ ದುರಾಚಾರ ಮಾಡಬಾರದೆಂದು ಎಚ್ಚರಿಕೆ ನೀಡಲಾಗಿದೆ.

2) ಶ್ರೀ ಬಸವರಾಜ ಎಸ್. ಗೌಡರ, (ನೋಂದಣಿ ಸಂಖ್ಯೆ: 15198) ಮೀಸಲುಪೇದೆ-282 ದರ್ಗ, ನವನಗರ ಬಾಗಲಕೋಟೆ-587102, 2004ನೇ ಸಾಲಿನ 2ನೇ ಅಧಿವೇಶನದ ಇಲಾಖಾ ಪರೀಕ್ಷೆಗಳಿಗೆ ಅವರ ಅಭ್ಯರ್ಥಿತ್ವವನ್ನು ರದ್ದುಪಡಿಸುವುದರ ಜೊತೆಗೆ ಮುಂದಿನ ನಾಲ್ಕು ಅಧಿವೇಶನಗಳ ಇಲಾಖಾ ಪರೀಕ್ಷೆಗಳಿಗೆ ಕೂರದಂತೆ ಅವರನ್ನು ಡಿಬಾರ್ ಮಾಡಲಾಗಿದೆ.

ಆಯೋಗದ ಆದೇಶದ ಮೇರೆಗೆ
ಕಾರ್ಯದರ್ಶಿ ಮತ್ತು ನಿಯಂತ್ರಕರು, ಇಲಾಖಾ
ಪರೀಕ್ಷೆಗಳು ಕರ್ನಾಟಕ ಲೋಕಸೇವಾ ಆಯೋಗ.

ಪಿ.ಆರ್.697

**ಸಹಕಾರ ಇಲಾಖೆ**

**ಸಹಾಯಕ ನಿಬಂಧಕರು ಚೀಟಿ ನಿಧಿಗಳು ಸಾಗರ ಉಪವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

ಅವಾರ್ಡಿಗಿಂತ ಅಥವಾ ಆದೇಶಕ್ಕಿಂತ ಪೂರ್ವದಲ್ಲಿ ಆಸ್ತಿ ಜಪ್ತಿ ಅರ್ಜಿ ಸಂಖ್ಯೆ 01/2005-06 ದಿನಾಂಕ: 07.04.2005 (ಚೀಟಿ ನಿಧಿ ದಾವಾ ಸಂಖ್ಯೆ: 01/0506ರ ಪ್ರಕರಣಕ್ಕೆ ಸಂಬಂಧಿಸಿದಂತೆ)

| **ಅರ್ಜಿದಾರರು:** | **ವಿರುದ್ಧ** | **ಎದುರು ಅರ್ಜಿದಾರರು:** |
|---|---|---|
| ಮಯೂರ ಚಿಟ್ಸ್ ಅಂಡ್ ಇನ್‌ವೆಸ್ಟ್‌ಮೆಂಟ್ಸ್ (ರಿ) ಅಶೋಕ ರಸ್ತೆ, ಸಾಗರ ಇದರ ಫೋರ್‌ಮನ್ ಆದ ಶ್ರೀ ಎಂ.ಜಿ. ಜಗನ್ನಾಥ್ ಇವರಿಂದ ಜಿ.ಪಿ.ಎ. ಮೂಲಕ ಅಧಿಕಾರ ಹೊಂದಿರುವ ಶ್ರೀ ಎಂ.ಎನ್. ಶ್ರೀನಿವಾಸಮೂರ್ತಿ | | ಶ್ರೀ ಮಂಜುನಾಥ ಎಂ.ಪಿ. ಬಿನ್ ಸುಬ್ರಾಯ ಹೆಗಡೆ, ಮನೆ ನಂ.270, 2ನೇ ಕ್ರಾಸ್, ಸದಾಶಿವನಗರ, ಸಾಗರ. |

**ಪ್ರಸ್ತಾವನೆ:**

ಅರ್ಜಿದಾರರು, ಎದುರು ಅರ್ಜಿದಾರರ ವಿರುದ್ಧ ಚೀಟಿ ನಿಧಿ ಕಾಯ್ದೆ 1982 ಕಲಂ 64ರಡಿಯಲ್ಲಿ ಹೂಡಿರುವ ದಾವಾ ಅರ್ಜಿಗೆ ಸಂಬಂಧಪಟ್ಟಂತೆ ಅವಾರ್ಡಿಗಿಂತ ಅಥವಾ ಆದೇಶಕ್ಕಿಂತ ಪೂರ್ವದಲ್ಲಿ ಆಸ್ತಿ ಜಪ್ತಿ ಮಾಡುವ ಕುರಿತು ಚೀಟಿ ನಿಧಿ ಕಾಯ್ದೆ 1982 ಕಲಂ 68ರ ಪ್ರಕಾರ ಆದೇಶ ನೀಡುವಂತೆ ಕೋರಿ ದಾವಾ ಅರ್ಜಿಯ ಜೊತೆಗೆ ಮಧ್ಯ ಕಾಲೀನ ಅರ್ಜಿಯನ್ನು ಸಹ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ಮಧ್ಯ ಕಾಲೀನ ಅರ್ಜಿಯಲ್ಲಿ ಎದುರು ಅರ್ಜಿದಾರರಿಂದ ಬರಬೇಕಾದ ಚೀಟಿ ಗುಂಪು "ಇ" ಇದರಲ್ಲಿ 8 ಚಂದಾ ಸಂಖ್ಯೆ ಬಾಬ್ತು ರೂ. 27000-00 ಮತ್ತು ಇದೇ ಗುಂಪಿನ ಇನ್ನೊಂದು ಚಂದಾ ಸಂಖ್ಯೆ 9 ಇದರ ಬಾಬ್ತು ರೂ. 27000-00 ಹೀಗೆ ಒಟ್ಟು ರೂ. 54,000-00 ಮತ್ತು ಬಡ್ಡಿ ಸಹಿತ ವಸೂಲು ಮಾಡಲು ಡಿಕ್ರಿ ನೀಡುವಂತೆ ಕೋರಿ ಈ ನ್ಯಾಯಾಲಯದಲ್ಲಿ ದಾವಾ ದಾಖಲು ಮಾಡಿರುತ್ತಾರೆ. ಸದ್ರಿ ದಾವಾ ಪ್ರಕರಣದ ವಿಚಾರಣೆ ನಡೆದು ತೀರ್ಪು ನೀಡಲು ಸಾಕಷ್ಟು ಕಾಲಾವಕಾಶ ಬೇಕಾಗುವುದರಿಂದ ಎದುರು ಅರ್ಜಿದಾರರು ತಮಗೆ ಸೇರಿದ ಸ್ಥಿರಾಸ್ತಿಗಳನ್ನು ಪರಭಾರೆ, ಹಸ್ತಾಂತರ ಮತ್ತು ಮಾರಾಟ ಮಾಡುವ ಸಾಧ್ಯತೆ ಇರುವುದಾಗಿ, ಈ ರೀತಿಯಾಗದಂತೆ ಕ್ರಮ ಜರುಗಿಸಲು ಚೀಟಿ ನಿಧಿ ಕಾಯ್ದೆ 1982 ಕಲಂ 68ರಲ್ಲಿ ಅವಕಾಶ ಇರುವುದರಿಂದ, ಎದುರು ಅರ್ಜಿದಾರರ ಸ್ಥಿರಾಸ್ತಿ ಜಪ್ತಿ ಮಾಡುವ ಸಲುವಾಗಿ ಅಗತ್ಯ ದಾಖಲಾತಿಗಳನ್ನು ನೀಡಿ ಜಪ್ತಿ ಆದೇಶ ನೀಡಲು ಅರ್ಜಿದಾರರು ವಿನಂತಿಸಿಕೊಂಡಿರುತ್ತಾರೆ. ಅರ್ಜಿದಾರರು ನೀಡಿರುವ ಮಾಹಿತಿ ಪ್ರಕಾರ ಶಿವಮೊಗ್ಗ ನಗರದ ಗೋಪಾಲಗೌಡ (ಗೋಪಾಳ) ಬಡಾವಣೆಯಲ್ಲಿನ ನಿವೇಶನದ ಕ್ರಮ ಸಂಖ್ಯೆ: ಡಿ-220 ಎದುರು ಅರ್ಜಿದಾರರಿಗೆ ಸೇರಿದ್ದು, ಇದಕ್ಕೆ ಸಂಬಂಧಪಟ್ಟಂತೆ ಸ್ವಾಧೀನಪತ್ರವನ್ನು ಆಯುಕ್ತರು, ಶಿವಮೊಗ್ಗ ನಗರಾಭಿವೃದ್ಧಿ ಪ್ರಾಧಿಕಾರ, ಶಿವಮೊಗ್ಗ ಮತ್ತು ದಿನಾಂಕ: 22.10.03 ರಂದು ಅಧಿಕ ಉಪ ನೋಂದಣಾಧಿಕಾರಿ ಶಿವಮೊಗ್ಗ ಇವರು ನೀಡಿರುವ 01.04.95 ರಿಂದ 21.10.2003 ರವರೆಗಿನ ಆಸ್ತಿಯ ಮೇಲಿನ ಋಣಭಾರಗಳ ಪ್ರಮಾಣ ಮತ್ತು ನೀಡಿರುವ ದಾಖಲಾತಿಯನ್ನು ಮಧ್ಯಕಾಲೀನ ಅರ್ಜಿಗೆ ಲಗತ್ತಿಸಿರುವರು.

ಅರ್ಜಿದಾರರ ಮನವಿಯನ್ನು ಪರಿಶೀಲಿಸಲಾಗಿ ಅರ್ಜಿದಾರರ ಕೋರಿಕೆಯು ಸಮಂಜಸವೆಂದು ಕಂಡುಬಂದ ಪ್ರಯುಕ್ತ ಎದುರು ಅರ್ಜಿದಾರರು ತಮ್ಮ ಸ್ಥಿರಾಸ್ತಿಯನ್ನು ಯಾವುದೇ ರೀತಿಯಲ್ಲಿ ಪರಭಾರೆ ಹಸ್ತಾಂತರ ಅಥವಾ ಮಾರಾಟ ಮಾಡುವುದನ್ನು ತತ್‌ಕ್ಷಣದಿಂದಲೇ ತಡೆಗಟ್ಟುವ ಸಲುವಾಗಿ ಮೇಲೆ ತಿಳಿಸಿರುವ ಸ್ಥಿರಾಸ್ತಿಯನ್ನು ಅವಾರ್ಡಿಗಿಂತ ಅಥವಾ ಆದೇಶಕ್ಕಿಂತ ಪೂರ್ವದಲ್ಲಿ ಜಪ್ತಿ ಆದೇಶವನ್ನು ನೀಡುವುದು ಸೂಕ್ತವೆಂದು ಕಂಡು ಬಂದಿದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಕ್ರ.ಸಂ. ಸ.ಸಂ.ಸ.ನಿ 25/ ಚೀ.ನಿ/ಕಲಂ 68/ ಸಿ.ಆರ್. 07/ 2005-06/342 ದಿನಾಂಕ: 21.04.2005 ಚೀಟಿ ನಿಧಿ ಕಾಯ್ದೆ 1982 ಕಲಂ 68 ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿ.ಎಂ.ಡಬ್ಲ್ಯೂ/ 25/ ಸಿ.ಎಲ್.ಎಂ./2001 ಬೆಂಗಳೂರು ದಿನಾಂಕ: 08.01.02ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಹೆಚ್.ದಿ. ಶಿವಣ್ಣ, ಸಹಾಯಕ ನಿಬಂಧಕರು, ಚೀಟಿ ನಿಧಿಗಳು, ಸಾಗರ ಉಪ ವಿಭಾಗ ಸಾಗರ ಆದ ನಾನು ಮೇಲ್ಕಂಡ ಅರ್ಜಿಯ ಎದುರು ಅರ್ಜಿದಾರರಿಗೆ ಸೇರಿದ ಈ ಆದೇಶಕ್ಕೆ ಲಗತ್ತಿಸಿದ ಅನುಸೂಚಿಯಲ್ಲಿ ತೋರಿಸಿರುವ ಸ್ಥಿರಾಸ್ತಿಯನ್ನು ಈ ಮೂಲಕ ಜಪ್ತಿ ಮಾಡಲಾಗಿದೆ. ಹೀಗೆ ಜಪ್ತಿ ಮಾಡಲ್ಪಟ್ಟ ಸ್ಥಿರಾಸ್ತಿಯನ್ನು ಎದುರು ಅರ್ಜಿದಾರರು ಮಾರಾಟ ಮಾಡುವುದಾಗಲೀ ಅಥವಾ ಹಸ್ತಾಂತರಿಸುವುದಾಗಲೀ, ಯಾವುದೇ ರೀತಿಯಲ್ಲಿ ಪರಭಾರೆ ಮಾಡದಿರಲು ಈ ಮೂಲಕ ಆಜ್ಞೆ ಹೊರಡಿಸಲಾಗಿದೆ.

**ಸ್ಥಿರಾಸ್ತಿಯ ವಿವರ**

ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ನಗರದ ಗೋಪಾಲಗೌಡ (ಗೋಪಾಳ) ಬಡಾವಣೆಯಲ್ಲಿನ ನಿವೇಶನ ಕ್ರಮ ಸಂಖ್ಯೆ: ಡಿ.220ರ ಅಳತೆ ಪೂರ್ವ ಪಶ್ಚಿಮ 12.00 ಮೀಟರ್, ಉತ್ತರ-ದಕ್ಷಿಣ 9.00 ಮೀಟರ್ ಒಟ್ಟು 108.00 ಚದರ ಮೀಟರ್, ಇದಕ್ಕೆ ಚಕ್ಕುಬಂದಿ: ಪೂರ್ವಕ್ಕೆ- ರಸ್ತೆ (ಹೆಚ್.ಟಿ. ಲೈನ್) ಪಶ್ಚಿಮಕ್ಕೆ-ರಸ್ತೆ ಉತ್ತರಕ್ಕೆ- ನಿವೇಶನ ಸಂಖ್ಯೆ: 221, ದಕ್ಷಿಣಕ್ಕೆ- ನಿವೇಶನ ಸಂಖ್ಯೆ-219.

ಎದುರು ಅರ್ಜಿದಾರರು ಈ ಆದೇಶ ತಲುಪಿದ 15 ದಿನದೊಳಗಾಗಿ ಈ ನ್ಯಾಯಾಲಯಕ್ಕೆ ಸಮಾಧಾನವಾಗುವ ಅಥವಾ ಜಪ್ತಿ ಮಾಡಲ್ಪಟ್ಟ ಸ್ಥಿರಾಸ್ತಿಗೆ ಸಮಾನ ಮೌಲ್ಯದ ಸೂಕ್ತ ಆಧಾರವನ್ನು ಒದಗಿಸಿ ಈ ಜಪ್ತಿಯನ್ನು ತೆರವು ಮಾಡಿಕೊಳ್ಳಲು ಅವಕಾಶ ನೀಡಿದೆ. ಈ ಅವಧಿಯಲ್ಲಿ ಜಪ್ತಿಯನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳದಿದ್ದಲ್ಲಿ ಈ ಆಜ್ಞೆಯು ಮುಂದುವರಿಯುವುದಲ್ಲದೇ ಸ್ಥಿರಗೊಳ್ಳುತ್ತದೆ ಎಂದು ತಿಳಿಯತಕ್ಕದ್ದು.

ಜಪ್ತಿಗೆ ಒಳಪಡಿಸಿರುವ ಸ್ಥಿರಾಸ್ತಿಯನ್ನು ಕೊಳ್ಳತಕ್ಕ ಯಾರೇ ಆದರೂ ಸದರಿ ಖರೀದಿಯನ್ನು ಈ ಆದೇಶಕ್ಕೆ ಒಳಪಟ್ಟು ಖರೀದಿ ಮಾಡಲಾಗಿದೆ ಎಂದು ತಿಳಿಯತಕ್ಕದ್ದು.

ದಿನಾಂಕ: 21.04.2005ರಂದು ನನ್ನ ಸಹಿ ಮತ್ತು ನ್ಯಾಯಾಲಯದ ದುಂಡು ಮುದ್ರೆಯೊಂದಿಗೆ ಈ ಆದೇಶವನ್ನು ಹೊರಡಿಸಿದೆ.

**ಹೆಚ್.ಡಿ. ಶಿವಣ್ಣ**

ಪಿ.ಆರ್.698

ಸಹಾಯಕ ನಿಬಂಧಕರು, ಚೀಟಿ ನಿಧಿಗಳು,
ಸಾಗರ ಉಪ ವಿಭಾಗ, ಸಾಗರ.

